# ಗುರು ಪ್ರಾರ್ಥನಾಮಂಜರಿ

ಗು

ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಗು ರು ವು

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

ವು

www.thraithashakam.org







# ಗುರು ಪ್ರಾರ್ಥನಾಮಂಜರಿ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 70/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಟಿ–ಸೃಷ್ಟಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ– ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ– ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ– ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು– ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ – ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಗುರು ಪ್ರಾರ್ಥನಾಮಂಜರಿ

ಈ ದಿನ ಮಾನವರನ್ನು ಮತ್ತು ಕೇವಲ ಐವತ್ತು ವರ್ಷಗಳ ಹಿಂದಿನ ಕಾಲದ ಮಾನವರನ್ನು ಗಮನಿಸಿದರೆ, ಇತ್ತ ಪ್ರಪಂಚ ಪದ್ಧತಿಯಲ್ಲಾಗಲಿ ಅತ್ತ ಪರಮಾತ್ಮ ಪದ್ಧತಿಯಲ್ಲಾಗಲಿ ಎಷ್ಟೋ ಗಣನೀಯವಾದ ವ್ಯತ್ಯಾಸ ಕಾಣಿಸುತ್ತಿದೆ. ಪ್ರಪಂಚ ಪದ್ಧತಿಯಲ್ಲಿ ನೋಡಿದರೆ ಒಂದು ನಾಗರಿಕತೆಯೇ ಅಲ್ಲದೆ, ಮಾನವನ ಜೀವನದಲ್ಲಿ ಎಷ್ಟೋ ಪರಿಕರಗಳು, ಯಂತ್ರಗಳೂ ಸ್ಥಳಮಾಡಿಕೊಂಡು ಮಾನವನ ಜೀವನವು ಸುಖಮಯವಾದ ಹಾಗೆ ಕಾಣಿಸುತ್ತಿದೆ. ಉನ್ನತವಾದ ವಿದ್ಯೆ, ಆಧುನಿಕ ಯಂತ್ರಗಳೂ, ವೇಗವಂತವಾದ ವಾಹನಗಳು, ನವೀನ ಪರಿಶೋಧನೆಗಳು, ಖಂಡಾಂತರ ಮಾರಣಾಯುಧಗಳು ಮನುಷ್ಯನ ಜೀವನದಲ್ಲಿ ಎಷ್ಟೋ ಉನ್ನತ ಸ್ಥಿತಿಗೆ ತೆಗೆದುಕೊಂಡು ಹೋದಹಾಗೆ ಕಾಣಿಸುತ್ತಿವೆ. ಇತ್ತ ಪ್ರಪಂಚ ರಂಗದಲ್ಲಿ ಕೇವಲ ಐವತ್ತು ವರ್ಷಗಳಲ್ಲಿ ಉನ್ನತ ಸ್ಥಿತಿಗೆ ಹೋದಹಾಗೆ ಕಾಣಿಸುತ್ತಿರುವ ಮನುಷ್ಯ, ಅತ್ತ ಪರಮಾತ್ಮನ ಆಧ್ಯಾತ್ಮಿಕ ರಂಗದಲ್ಲಿ ಬಹಳ ಹಿಂದುಳಿದು ಹೋದಹಾಗೆ ಕಾಣಿಸುತ್ತಿದ್ದಾನೆ. ಅರ್ಧ ಶತಮಾನದ ಹಿಂದಿನ ಕಾಲದಲ್ಲಿ ಮನುಷ್ಯನಲ್ಲಿದ್ದ ತತ್ವಭಾವವಾಗಲಿ, ಆಧ್ಯಾತ್ಮಿಕ ಚಿಂತನೆಯಾಗಲಿ, ದೇವರ ಮೇಲೆ ವಿಶ್ವಾಸವಾಗಲಿ ಈ ದಿನ ಇಲ್ಲದೆ ಹೋದಹಾಗೆ ತಿಳಿಯುತ್ತಿದೆ. ಪ್ರಪಂಚರಂಗದಲ್ಲಿ ಎಷ್ಟೋ ಎತ್ತರಕ್ಕೆ ಬೆಳೆದುಹೋದ ಮನುಷ್ಯ, ಪರಮಾತ್ಮ ರಂಗದಲ್ಲಿ ಬಹಳ ಕೆಳಮಟ್ಟಕ್ಕೆ ಹೋಗಿದ್ದಾನೆ. ಇದು ನಮ್ಮ ಉದ್ದೇಶವಾದರೆ ಕೆಲವರು ಏನನ್ನುತ್ತಿದ್ದಾರೆಂದರೆ! “ಮನುಷ್ಯ ಪ್ರಪಂಚ ರಂಗದಲ್ಲಿ ಉನ್ನತ ಸ್ಥಿತಿಗೇರಿದ ಮಾತು ವಾಸ್ತವವೆ ಆದರೆ ಪರಮಾತ್ಮ ರಂಗದಲ್ಲಿ ಅಧೋಗತಿಗಿಳಿದಿದ್ದಾನೆನ್ನುವುದು ನಾವು ನಂಬುವುದಿಲ್ಲ.” ಎನ್ನುತ್ತಿದ್ದಾರೆ. ಇನ್ನೂ ಏನನ್ನುತ್ತಿದ್ದಾರೆಂದರೆ! ಪೂರ್ವಕಾಲದಲ್ಲಿ ಊರಿಗೊಂದು ರಾಮನ ಗುಡಿಯಾಗಲಿ, ಅದಿಲ್ಲದೆ ಹೋದರೆ ಆಂಜನೇಯನ ಗುಡಿಯಾಗಲಿ ಇರುತ್ತಿತ್ತು. ಕೆಲವು ಊರುಗಳಲ್ಲಿ ಅವು ಸಹ ಹಾಳುಬಿದ್ದು ಹೋಗಿ ಯಾವ ಗುಡಿ ಇರುತ್ತಿರಲಿಲ್ಲ. ಈ ದಿನ ನೋಡಿದರೆ ಪ್ರತಿಯೊಂದು ಊರಿನಲ್ಲು, ಪ್ರತಿ ಪಟ್ಟಣದಲ್ಲು ಸಾಯಿಬಾಬ ಗುಡಿ, ಅಯ್ಯಪ್ಪಸ್ವಾಮಿ ಗುಡಿ ಮೊದಲಾದ ಎಷ್ಟೋ ಹೊಸ ದೇವತೆಗಳ ಗುಡಿಗಳು ಸಹ ತಯಾರಾಗಿವೆ.

ರಾಮ, ಆಂಜನೇಯನ ಗುಡಿಗಳು ಪುನಃ ನಿರ್ಮಿಸಲ್ಪಟ್ಟಿವೆ. ಪೂರ್ವಕ್ಕಿಂತ ಈಗಲೆ ಎಷ್ಟೋ ಹೊಸ ಗುಡಿಗಳು ತಯಾರಾಗಿ ಎಷ್ಟೋ ಪೂಜೆಗಳು ನಡೆಯುತ್ತಿವೆ. ಅಷ್ಟೇ ಅಲ್ಲದೆ ಭಕ್ತಿ ವಿಧಾನವನ್ನು ಎಷ್ಟೋ ಜನ ಸ್ವಾಮೀಜಿಯರು ತಿಳಿಸುತ್ತಿದ್ದಾರೆ. ಈಗಿನ ಕಾಲದಲ್ಲಿಯೇ ಅತ್ತ ಗುಡಿಗಳು, ಗೋಪುರಗಳು ಎಷ್ಟೋ ಅಭಿವೃದ್ಧಿಯಾಗಿ, ಇತ್ತ ಸ್ವಾಮೀಜಿಗಳು, ಬಾಬಾಗಳು ಬಹಳ ಜನ ಇದ್ದು ಭಕ್ತಿ ಭಾವವನ್ನು ಬೆಳೆಸುತ್ತಾ ಇದ್ದರೆ ನೀವೇನು ಪರಮಾತ್ಮರಂಗದಲ್ಲಿ ಅಧೋಗತಿಗೆ ಹೋಗಿದ್ದಾರೆನ್ನುತ್ತೀರಾ? ಎಂದು ನಮ್ಮನ್ನು ಪ್ರಶ್ನಿಸುತ್ತಿದ್ದಾರೆ. ಈ ಮಾತಿಗೆ ನಮ್ಮ ಸಮಾಧಾನ ಏನೆಂದರೆ! ಇಂದಿನ ಕಾಲದಲ್ಲಿ ಗುಡಿಗಳೂ, ಗೋಪುರಗಳೂ, ಸ್ವಾಮೀಜಿಗಳು, ಬಾಬಾಗಳು ಹೆಚ್ಚಾಗಿರುವ ಮಾತು ನಿಜವೇ. ಗುಡಿಗಳಲ್ಲಿ ಅನೇಕ ವಿಧ ಪೂಜೆಗಳು ವಿಧವಿಧವಾದ ಅರ್ಚನೆಗಳ ಹೆಸರುಗಳಿಂದ ನಿತ್ಯವೂ ನಡೆಯುತ್ತಿರುವುದು ಸತ್ಯವೇ. ಅಷ್ಟು ಮಾತ್ರಕ್ಕೆ ಮನುಷ್ಯ ದೈವರಂಗದಲ್ಲಿ ಹಿಂದೆ ಬಿದ್ದಿಲ್ಲ ಎನ್ನುವುದು, ಪ್ರಪಂಚ ರಂಗದಲ್ಲಿ ಮುಂದಕ್ಕೆ ಹೋದ ಹಾಗೆ ದೈವರಂಗದಲ್ಲಿಯು ಸಹ ಮುಂದಕ್ಕೆ ಹೋಗಿದ್ದಾನೆನ್ನುವುದು ಅಸತ್ಯವೆಂದೇ ಹೇಳುತ್ತಿದ್ದೇವೆ. ಏಕೆಂದರೆ ಕೆಲವು ವಿಷಯಗಳಲ್ಲಿ ಕಣ್ಣಿಗೆ ಕಾಣಿಸುವವೆಲ್ಲಾ ಸತ್ಯಗಳೆಂದು ಅಂದುಕೊಳ್ಳುವುದು ತಪ್ಪಾಗುತ್ತದೆ. ಮರುಭೂಮಿ ನೀರಿರುವ ಸರಸ್ಸಿನ ಹಾಗೆ ಕಂಡರು ಕೊನೆಗೆ ಹೋಗಿ ನೋಡಿದರೆ ಅಲ್ಲಿ ನೀರು ಇಲ್ಲವೆಂದು ತಿಳಿಯುತ್ತದೆ. ಅದೇ ವಿಧವಾಗಿ ಆಧುನಿಕ ಪರಿಕರಗಳಿಂದ, ಯಂತ್ರಗಳಿಂದ ವಾಹನಗಳಿಂದ, ವೈದ್ಯದಿಂದ ಮನುಷ್ಯನ ಜೀವನವು ಸುಖಮಯವಾದಂತೆ ಕಾಣಿಸಿದರೂ, ಮರುಭೂಮಿಯ ಹಾಗೆ ಮನುಷ್ಯನ ಜೀವನದಲ್ಲಿ ವಾಸ್ತವಕ್ಕೆ ಪೂರ್ವವಿದ್ದ ಸುಖವಿಲ್ಲ. ಹಾಗೆ ಗುಡಿಗಳೂ, ಗೋಪುರಗಳು, ಸ್ವಾಮೀಜಿಗಳು, ಬಾಬಾಗಳು, ಆರಾಧನೆಗಳು, ಅರ್ಚನೆಗಳು ಎಷ್ಟು ಬೆಳೆದರೂ ಮನುಷ್ಯನ ಜೀವನದಲ್ಲಿ ಆಧ್ಯಾತ್ಮಿಕತೆ ಸ್ವಲ್ಪವೂ ಇಲ್ಲದೆ ಹೋಗಿದೆ ಎನ್ನುವ ಮಾತು ನಿಜ.

ಮನುಷ್ಯನ ಸುಖವಾಗಲಿ, ಆಧ್ಯಾತ್ಮಿಕವಾಗಲಿ ಬಾಹ್ಯರಂಗಕ್ಕೆ ಸಂಬಂಧಿಸಿರುವವಲ್ಲ, ಅವು ಅಂತರಂಗಕ್ಕೆ ಮಾತ್ರ ಸಂಬಂಧಿಸಿರುವುದೆಂದು

ಯಾವ ಮನುಷ್ಯ ಮರೆತುಹೋಗಬಾರದು. ಆದ್ದರಿಂದ ಮನುಷ್ಯನ ಸುಖಕ್ಕಾಗಲಿ, ಆಧ್ಯಾತ್ಮಿಕಕ್ಕಾಗಲಿ ಕಣ್ಣಿಗೆ ಕಾಣಿಸುವವುಗಳೊಂದಿಗೆ ಸಂಬಂಧ ಇರುವುದಿಲ್ಲ. ಆದ್ದರಿಂದ ಹೊರಗಿನ ಪ್ರಪಂಚದಲ್ಲಿ ಯಂತ್ರಗಳಿದ್ದರೂ, ವಾಹನಗಳಿದ್ದರೂ, ರಸಾಯನಿಕ ಔಷದಗಳಿದ್ದರೂ, ಮನುಷ್ಯ ಒಳಗೆ ಸುಖಪಡುತ್ತಿದ್ದಾನೆಂದು ಹೇಳಲಾರೆವು. ವಾಸ್ತವವಾಗಿ ಈ ದಿನ ಕಣ್ಣಿಗೆ ಕಾಣಿಸುವ ಎಷ್ಟು ಸೌಕರ್ಯಗಳಿದ್ದರೂ, ಮನುಷ್ಯ ಒಳಗೆ ಮಾತ್ರ ಅಸಂತೃಪ್ತಿಯಿಂದಲೆ, ಅಸುಖದಿಂದಲೆ ಇದ್ದಾನೆ. ಹಾಗೆ ಈ ದಿನ ಹೊರಗೆ ಕಾಣಿಸುವ ಭಕ್ತಿ ಮಾರ್ಗಗಳು ಎಷ್ಟು ಇದ್ದರೂ, ಮನುಷ್ಯನಿಗೆ ಒಳಗೆ ಆಧ್ಯಾತ್ಮಿಕ ಇಲ್ಲವೆಂದೇ ಹೇಳಬಹುದು. ನೀವೀಗ ಒಂದು ಪ್ರಶ್ನೆ ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! ನೋಡುವುದಕ್ಕೆ ದೇಶ ಎಷ್ಟೋ ಅಭಿವೃದ್ದಿ ಹೊಂದಿ, ಸುಖವಂತವಾದ ಯಂತ್ರಸಾಮಾಗ್ರಿ ಇರುವಾಗ, ಅಂತರಂಗದಲ್ಲಿ ಜೀವಾತ್ಮನು ಏಕೆ ಅಸಂತೃಪ್ತಿ ಅಸುಖಃದಿಂದ ಇದ್ದಾನೆಂದು ಪ್ರಶ್ನಿಸಬಹುದು. ಮತ್ತು ಮೇಲೆ ಎಷ್ಟೋ ಅಭಿವೃದ್ಧಿ ಹೊಂದಿದ ಗುಡಿಗಳು, ಗೋಪುರಗಳು ಇದ್ದರೂ, ಸ್ವಾಮೀಜಿಗಳ ಉಪನ್ಯಾಸಗಳು ಇದ್ದರೂ, ಮನುಷ್ಯ ಅಂತರಂಗದಲ್ಲಿ ಆಧ್ಯಾತ್ಮಿಕತೆಯನ್ನು ಏಕೆ ತಿಳಿಯದೆ ಹೋಗುತ್ತಿದ್ದಾನೆಂದು ಸಹ ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ! ಪ್ರಪಂಚದಲ್ಲಿ ಮನುಷ್ಯ ಎಷ್ಟು ಎತ್ತರಕ್ಕೆ ಬೆಳೆದರೂ ಅದೆಲ್ಲವೂ ಮನುಷ್ಯನನ್ನು ಅಂತರಂಗದಲ್ಲಿ ಅಷ್ಟೇ ಕೆಳಮಟ್ಟಕ್ಕೆ ಹೋಗುವಂತೆ ಮಾಡುತ್ತಿದೆಯೆಂದು, ಹೊರಗೆ ಎಷ್ಟು ಅನುಕೂಲಗಳಿದ್ದರೂ ಒಳಗೆ ಏನು ಪ್ರಯೋಜನವಿಲ್ಲವೆಂದು, ಮನುಷ್ಯ ಪೂರ್ವಕ್ಕಿಂತ ಹೆಚ್ಚಾಗಿ ಚಿಂತಿಸುತ್ತಿದ್ದಾನೆಂದು ಮತ್ತು ಪೂರ್ವದಲ್ಲಿಲ್ಲದ ಅನೇಕ ರೋಗಗಳನ್ನು ಹೊಂದುತ್ತಿದ್ದಾನೆಂದು, ಪೂರ್ವದಲ್ಲಿದ್ದ ತೃಪ್ತಿ ಮನುಷ್ಯನಲ್ಲಿ ಇಲ್ಲದೆಹೋಗಿದೆಯೆಂದು ಬಹಳ ಜನ ಒಪ್ಪಿಕೊಳ್ಳುತ್ತಿದ್ದಾರೆ. ಎಷ್ಟು ಔಷಧಗಳನ್ನು ಶಾಸ್ತ್ರಜ್ಞರು ಕಂಡುಹಿಡಿದರೂ, ಅವುಗಳನ್ನು ಅತಿಕ್ರಮಿಸಿ ಪೂರ್ವವಿಲ್ಲದ ರೋಗಗಳು ಈಗ ಬರಲಿಲ್ಲವೆಂದು ಯಾರಾದರೂ ಹೇಳಬಲ್ಲಿರಾ. ವೈದ್ಯರಿಗೆ ತಿಳಿಯದ ಎಷ್ಟೋ ರೋಗಗಳು ಹುಟ್ಟಿಬರುತ್ತಿರುವ ಮಾತು ಎಲ್ಲರೂ ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಪೂರ್ವದಲ್ಲಿ ಮನುಷ್ಯರಲ್ಲಿ ಇಲ್ಲದ ಆಂದೋಳನ ಇಂದಿನ

ಮನುಷ್ಯನಲ್ಲಿ ಇದೆ. ಪೂರ್ವದಲ್ಲಿ ಇಲ್ಲದ ಸ್ವಾರ್ಥ ಈ ದಿನ ಮನುಷ್ಯನಲ್ಲಿ ಬೆಳೆದುಹೋಗಿ ಹೊರಗಿನ ಸುಖಗಳು ಎಷ್ಟಿದ್ದರೂ ಅಂತರಂಗದಲ್ಲಿ ಸುಖವಿಲ್ಲದೆ ಹೋಗಿದೆ. ಚೆನ್ನಾಗಿ ಯೋಚಿಸಿ ನೋಡಿದರೆ ನಾವು ಹೇಳುವ ಮಾತು ನಿಜವೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಇತರರ ವಿಷಯ ಪಕ್ಕಕ್ಕಿಟ್ಟು ನಿನ್ನ ವಿಷಯವನ್ನು ನೀನು ನೋಡಿಕೊಂಡರೂ, ಆ ದಿನ ನಿನ್ನ ತಾತ, ಮುತ್ತಾತರು ಕಾಲ್ನಡಿಗೆಯಲ್ಲಿ ನಡೆಯುತ್ತಿದ್ದಾಗ, ಈ ದಿನ ನೀನು ಕಾರಿನಲ್ಲಿ ಹೋಗುತ್ತಿದ್ದರೂ, ಅವರು ಹೊಂದಿದ ಅಂತರಂಗ ಸುಖವನ್ನು ನೀನು ಹೊಂದಲಿಲ್ಲವೆಂದು ಹೇಳಬಹುದು. ಅವರು ಅನಾಗರೀಕ ಕಾಲದಲ್ಲಿದ್ದರೂ ರೋಗನಿರೋಧಕ ಶಕ್ತಿಯನ್ನು ಹೊಂದಿದ್ದರು. ಆಗ ಇಲ್ಲದ ಔಷಧಿಗಳು ಈಗಿರುವಾಗ ಈ ದಿನ ಮನುಷ್ಯನಲ್ಲಿ ರೋಗನಿರೋಧಕ ಶಕ್ತಿ ಕಡಿಮೆಯಾಗಿ ಹೋಗಿದೆಯೆಂದೇ ಹೇಳಬಹುದು. ಇದೆಲ್ಲವನ್ನು ಗಮನಿಸಿದರೆ ಬಾಹ್ಯವಾಗಿ ಎಷ್ಟು ಸುಖಗಳು ಬೆಳೆದರೂ, ಶರೀರಾಂತರಂಗದಲ್ಲಿ ಮನುಷ್ಯನಿಗೆ ದುಃಖಗಳೆ ಹೆಚ್ಚಾಗಿವೆಯೆಂದು ಹೇಳದೆ ತಪ್ಪುವುದಿಲ್ಲ.

ಇನ್ನು ದೈವರಂಗದೊಳಗೆ ಬಂದು ನೋಡಿದರೆ, ಪೂರ್ವಕ್ಕಿಂತ ಈಗಿನ ಕಾಲದಲ್ಲಿ ಆರಾಧನೆಗಳು, ಅರ್ಚನೆಗಳು ಹೆಚ್ಚಾಗಿ, ಮನುಷ್ಯ ದೇವರಿಗೆ ದೂರವಾಗಿದ್ದಾನೆಂದು, ಆಧ್ಯಾತ್ಮಿಕತೆಯ ಅರ್ಥವೇ ಮನುಷ್ಯನಿಗೆ ತಿಳಿಯದೆ ಹೋಗಿದೆಯೆಂದು ಹೇಳಬಹುದು. ಈಗ ದೇವಾಲಯಗಳು ಬೆಳೆದು ಹೋಗಿ, ದೇವತೆಗಳು ಬೆಳೆದುಹೋಗಿ, ಬೋಧಿಸುವ ಸ್ವಾಮೀಜಿಗಳು ಬೆಳೆದು ಹೋಗಿದ್ದಾರೆಂದು ಒಂದು ಕಡೆ ಹೇಳುತ್ತಾ, ಮತ್ತೊಂದು ಕಡೆ ಮನುಷ್ಯ ಆಧ್ಯಾತ್ಮಿಕವಾಗಿ ಅಭಿವೃದ್ಧಿಯಾಗದೆ ಹೋಗಿ, ದೇವರ ಜ್ಞಾನಕ್ಕೆ ದೂರವಾಗಿ ಹೋಗಿದ್ದಾನೆಂದು ಹೇಳುತ್ತಿದ್ದೀರಲ್ಲಾ! ದೇವಾಲಯಗಳು, ಸ್ವಾಮೀಜಿಗಳು ಬೆಳೆದಾಗ ಮನುಷ್ಯನಲ್ಲಿ ಆಧ್ಯಾತ್ಮಿಕ ಜ್ಞಾನವೇಕೆ ಬೆಳೆದಿಲ್ಲವೆಂದು ಪ್ರತಿಯೊಬ್ಬರಿಗು ಸಂಶಯ ಬರಬಹುದು. ಅದನ್ನು ಕುರಿತು ವಿವರವಾಗಿ ತಿಳಿಸುವುದೇ ಈ ಪುಸ್ತಕದ ಸಾರಾಂಶ. ಈ ಸಾರಾಂಶವನ್ನು ತಿಳಿದುಕೊಳ್ಳುವುದಕ್ಕಿಂತ ಮೊದಲು,

ನಾವು ಕೆಲವು ಪ್ರಶ್ನೆಗಳನ್ನು ಹಾಕಿಕೊಂಡು ನೋಡಬೇಕಾಗಿದೆ. ಮೊದಲು ಭಕ್ತಿ ಎಂದರೆ ಏನು? ಎರಡನೆಯದು ಆಧ್ಯಾತ್ಮಿಕತೆ ಎಂದರೆ ಏನು? ಮೂರನೆಯದು ಗುರು ಎಂದರೆ ಯಾರು? ಮುಖ್ಯವಾಗಿ ಈ ಮೂರು ಪ್ರಶ್ನೆಗಳಿಗೆ ಉತ್ತರವನ್ನು ತಿಳಿದುಕೊಂಡರೆ ಈ ಪುಸ್ತಕದಲ್ಲಿನ ಸಾರಾಂಶವೆಲ್ಲವು ಅರ್ಥವಾಗಿಹೋಗುತ್ತದೆ. ಈಗ ಮೊದಲು ಭಕ್ತಿಯನ್ನು ಕುರಿತು ತಿಳಿದುಕೊಳ್ಳೋಣ.

ಭಕ್ತಿ ಎಂಬ ಪದಕ್ಕೆ ಸರಿಯಾದ ಅರ್ಥ ವಿಶ್ವಾಸ ಎಂದು ಹೇಳಬಹುದು. ವಿಶ್ವಾಸ ಎಂದರೆ ನಂಬುವುದು ಎಂದರ್ಥ. ಇಲ್ಲಿ ನೀನು ಯಾರನ್ನು ನಂಬುತ್ತಿದ್ದೀಯ? ಎಂದು ಪ್ರಶ್ನಿಸಿಕೊಂಡರೆ, ಪ್ರತಿ ಮನುಷ್ಯ ನೋಡದೆ ನಂಬ ಬೇಕಾಗಿರುವುದು ದೇವರನ್ನೊಂದೇ ಎಂದು ತಿಳಿಯುತ್ತದೆ. ನೋಡಿ ನಂಬಬೇ ಕಾಗಿರುವವು ಕೆಲವು, ನೋಡದೆ ನಂಬಬೇಕಾಗಿರುವವು ಕೆಲವು ಭೂಮಿ ಮೇಲೆ ಇವೆ. ದೇವರ ವಿಷಯಕ್ಕೆ ಬಂದರೆ ದೇವರಿಗೆ ಆಕಾರವಿಲ್ಲ, ಹೆಸರೂ ಇಲ್ಲವಾದ್ದರಿಂದ ನೋಡದೆ ನಂಬಬೇಕು. ನಂಬಿಕೆಯಿರಬೇಕು ಆದರೆ ನಂಬಿಕೆ ಕುರುಡುನಂಬಿಕೆ ಆಗಬಾರದು. ಕುರುಡು ಎಂದರೆ ಕಾಣಿಸದೆ ಕತ್ತಲಾಗಿ ಇರುವುದೆಂದು ಅರ್ಥ. ಆದ್ದರಿಂದ ಕುರುಡುನಂಬಿಕೆಯನ್ನು ಮೂಢನಂಬಿಕೆ ಯೆಂದು ಸಹ ಅನ್ನುತ್ತಿದ್ದೇವೆ. ಮೂಢ ಅಂದರೆ! ಅಂಧಕಾರ ಅಥವಾ ಕತ್ತಲು ಎಂದು ಅರ್ಥ. ಇದನ್ನನುಸರಿಸಿ ನೋಡಿದರೆ ನಮ್ಮ ನಾಸ್ತಿಕರು, ಹೇತುವಾದಿಗಳು ಬಳಸುವ ಮೂಢನಂಬಿಕೆ ಅನ್ನುವ ಪದದ ಅರ್ಥ ಕುರುಡುಭಕ್ತಿ ಎಂದು ತಿಳಿಯುತ್ತದೆ. ದೇವರ ವಿಷಯದಲ್ಲಿ ಮನುಷ್ಯರಿಗೆ ಮೂಢ ನಂಬಿಕೆಗಳು ಇವೆಯೆಂದು ಅನ್ನುತ್ತಿರುತ್ತಾರೆ. ಎಂದರೆ ಕಾಣಿಸದ ದೇವರ ವಿಷಯದಲ್ಲಿ ಕುರುಡುನಂಬಿಕೆಯೇ ಅಲ್ಲದೆ ದೃಷ್ಠಿಯಿರುವ ನಂಬಿಕೆಯು ಸಹ ಇದೆಯೆಂದು, ಇದರಿಂದ ದೃಷ್ಠಿಯಿಲ್ಲದ ಭಕ್ತಿಯನ್ನು ಮೂಢನಂಬಿಕೆಯೆಂದು, ಅಂತಹ ಮೂಢನಂಬಿಕೆ ದೇವರ ಬಗ್ಗೆ ಇರಬಾರದೆಂದು, ಮೂಢನಂಬಿಕೆ ಹೇತುವಾದಕ್ಕೆ ನಿಲ್ಲುವುದಿಲ್ಲವೆಂದು ಹೇಳುತ್ತಿದ್ದೇವೆ. ದೇವರು ಕಾಣಿಸದಿದ್ದರೂ, ದೇವರ ಕುರಿತಾದ ಸಮಾಚಾರವನ್ನು ಸವಿವರವಾಗಿ ಶಾಸ್ತ್ರಬದ್ಧವಾಗಿ ತಿಳಿದು ವಿಶ್ವಾಸಿಸುವುದನ್ನು

ದೃಷ್ಠಿಯಿರುವ ಭಕ್ತಿ ಅನ್ನುತ್ತಿದ್ದೇವೆ. ಪ್ರಸ್ತುತ ಕಾಲದಲ್ಲಿ ದೇವರ ಬಗ್ಗೆ ಮನುಷ್ಯರಿಗೆ ದೃಷ್ಠಿಯಿರುವ ಭಕ್ತಿ ಇದೆಯಾ? ಮೂಢಭಕ್ತಿ ಇದೆಯಾ? ಎಂದು ಪ್ರಶ್ನಿಸಿಕೊಂಡು ನೋಡಿದರೆ ತೊಂಭತ್ತೊಂಭತ್ತು ಪಾಲು ಮೂಢ ಭಕ್ತಿಯೇ ಇದೆಯೆಂದು ಹೇಳಬಹುದು. ಆದ್ದರಿಂದ ದೃಷ್ಠಿಯಿಲ್ಲದವನು ಏನನ್ನೋ ಹಿಡಿದುಕೊಂಡು ಏನೋ ಅಂದುಕೊಂಡ ಹಾಗೆ, ಮನುಷ್ಯ ಮೂಢಭಕ್ತಿಯಿಂದ ದೇವರಲ್ಲದ್ದನ್ನು ಹಿಡಿದುಕೊಂಡು ದೇವರು ಎಂದುಕೊಳ್ಳುತ್ತಿದ್ದಾನೆ. ಹಾಗೆ ಅಂದುಕೊಳ್ಳುವುದರಿಂದ ದೇವರನ್ನು ಬಿಟ್ಟು ದೆವ್ವವನ್ನು ಆಶ್ರಯಿಸಿದಂತಾಗುತ್ತದೆ. ಮೂಢಭಕ್ತಿಯಿಂದ ದೇವರ ವಿಷಯದಲ್ಲಿ ಮೋಸಹೋಗಿ, ದೇವರಲ್ಲ ಎನ್ನುವುದನ್ನು ದೇವರೆಂದುಕೊಳ್ಳುವುದು ನಡೆಯುತ್ತದೆ. ಹಾಗೆ ಅಂದುಕೊಳ್ಳುವುದು ಮಾನವ ಜೀವನದಲ್ಲಿ ದೊಡ್ಡ ತಪ್ಪು. ಪ್ರಪಂಚದಲ್ಲಿ ಕಾಣಿಸುವವುಗಳನ್ನು ಕುರಿತು ಬಹಳ ವಿವರವಾಗಿ ತಿಳಿದುಕೊಳ್ಳುತ್ತಿದ್ದೇವೆ. ಒಂದು ಕಂಪ್ಯೂಟರ್ ಕಣ್ಣಿಗೆ ಕಾಣಿಸುವ ಪರಿಕರವೇ ಆಗಿರುವಾಗ ಇತರರಿಂದ ಅದನ್ನು ಕುರಿತು ಪೂರ್ತಿಯಾಗಿ ತಿಳಿದುಕೊಂಡು ಆಗ ಕಂಪ್ಯೂಟರನ್ನು ಆಶ್ರಯಿಸುತ್ತಿದ್ದೇವೆ. ಕಂಪ್ಯೂಟರ್ ಕುರಿತು ತಿಳಿಯದಿರುವಾಗ ನಿನ್ನ ಹತ್ತಿರ ಇಟ್ಟುಕೊಂಡಿರುವುದು ಕಂಪ್ಯೂಟರ್ ಅಲ್ಲದೆ, ಕಂಪ್ಯೂಟರ್ ಹಾಗೆ ಇರುವ ಖಾಲಿಡಬ್ಬಾ ಆಗಿರಬಹುದಲ್ಲವೆ! ಕಂಪ್ಯೂಟರ್‌ನ ಕೆಲಸವನ್ನು ಕುರಿತು ತಿಳಿದುಕೊಳ್ಳದೆ, ಕುರುಡರಂತೆ ಒಂದು ಡಬ್ಬವನ್ನು ಕಂಪ್ಯೂಟರ್ ಎಂದುಕೊಂಡರೆ ಅದು ಹೇಗೆ ಕಂಪ್ಯೂಟರ್ ಅಲ್ಲವೊ, ಹಾಗೆ ದೇವರ ವಿವರ ತಿಳಿಯದೆ ಕುರುಡರಂತೆ ಒಂದನ್ನು ದೇವರೆಂದು ಅಂದುಕೊಂಡರೆ ಅದು ದೇವರೇ ಅಲ್ಲ. ದೇವರೆಂದು ಕುರುಡನಂತೆ ನೀನು ವಿಶ್ವಾಸಿಸಿದಷ್ಟು ಮಾತ್ರಕ್ಕೆ ಅದು ದೇವರು ಆಗದೆ ಹೋಗಬಹುದು. ಆದ್ದರಿಂದ ದೇವರ ವಿವರವನ್ನು ತಿಳಿದು ವಿಶ್ವಾಸಿಸಿದಾಗ, ಆ ವಿಶ್ವಾಸವು ಸರಿಯಾದದ್ದಾಗುತ್ತದೆ. ಹಾಗಲ್ಲದೆ ಹೋದರೆ ಅದು ಮೂಢ ನಂಬಿಕೆಯೇ ಆಗುತ್ತದೆ.

ಮೂಢನಂಬಿಕೆ ಹೇತುವಾದಿಗಳಿಗೆ ಸಮಾಧಾನ ಕೊಡುವುದಿಲ್ಲ. ದೃಷ್ಠಿಯಿರುವ ವಿಶ್ವಾಸವು ಯಾರಿಗಾದರು ಸಮಾಧಾನ ಕೊಡಬಲ್ಲದು. ಒಂದು

ವೇಳೆ ಸರಿಯಾದ ಸಮಾಧಾನವನ್ನು ಸಹ ಅಲ್ಲವೆನ್ನುವವನು ಹೇತುವಾದಿಯಲ್ಲ. ಆತನನ್ನು ನಾಸ್ತಿಕವಾದಿ ಅನ್ನಬೇಕು. ಆದ್ದರಿಂದ ದೈವಭಕ್ತಿಯನ್ನು ಕುರಿತು ಮಾತನಾಡುವಾಗ ಹೇತುವಾದಿಯೊಂದಿಗಾದರೂ ಮಾತನಾಡಬಹುದು, ಆದರೆ ನಾಸ್ತಿಕವಾದಿಯೊಂದಿಗೆ ಮಾತನಾಡಬಾರದು. ಈಗಿನ ಕಾಲದಲ್ಲಿ ಭಕ್ತಿ ಎನ್ನುವುದು ಪ್ರಜೆಗಳಲ್ಲಿದ್ದರೂ, ಮೂಢಭಕ್ತಿಯೇ ಹೆಚ್ಚಾಗಿದೆ. ಪ್ರಪಂಚರಂಗದಲ್ಲಿ ಎಷ್ಟೋ ತಿಳಿವಳಿಕೆ ಇರುವವರಾದರೂ ದೇವರ ಭಕ್ತಿ ಹತ್ತಿರಕ್ಕೆ ಬರುವಷ್ಟರಲ್ಲಿ ಬಹಳ ತಿಳಿವಳಿಕೆಯಿಲ್ಲದವರ ಹಾಗೆ ಪ್ರವರ್ತಿಸುತ್ತಿದ್ದಾರೆ. ಆಲೋಚನೆ ಮಾಡದೆ ಕುರುಡಾಗಿ ನಂಬುತ್ತಿದ್ದಾರೆ. ನಮ್ಮ ಭಕ್ತಿ ಸರಿಯಾದದ್ದೆ, ಅಲ್ಲವೆ? ಎಂದು ಸ್ವಲ್ಪವಾದರೂ ಹಿಂತಿರುಗಿ ನೋಡಿಕೊಳ್ಳುವುದಿಲ್ಲ. ನಾವು ನಂಬಿರುವುದು ದೇವರನ್ನಾ? ದೇವರು ಸೃಷ್ಠಿಸಿರುವುದನ್ನಾ? ಎಂದು ಯೋಚಿಸುವುದಿಲ್ಲ. ದೇವರ ಬಗ್ಗೆ ತೋರಿಸಬೇಕಾದ ಭಕ್ತಿಯನ್ನು ದೇವರು ಅಲ್ಲ ಎನ್ನುವವುಗಳ ಮೇಲೆ ತೋರಿಸುತ್ತಾ ಮೂಢನಾಗಿ ಪ್ರವರ್ತಿಸುತ್ತಿದ್ದಾನೆ. ಬಹಳ ಜನ ಪ್ರಥಮ ದಶೆಯಲ್ಲಿನ ಭಕ್ತಿಯ ಹತ್ತಿರ, ದೃಷ್ಠಿಯಿರುವ ಭಕ್ತಿ ಅಲ್ಲದೆ ದೃಷ್ಠಿಯಿಲ್ಲದ ಕುರುಡು ವಿಶ್ವಾಸವನ್ನು ಹೊಂದಿದ್ದಾರೆ. ಹಾಗಿರುವ ಮೂಢ ವಿಶ್ವಾಸವನ್ನು ಬಿಟ್ಟು, ದೃಷ್ಠಿಹೊಂದಿರುವ ವಿಶ್ವಾಸ ಇರುವವರಾಗಿ, ನಿನ್ನನ್ನು, ನನ್ನನ್ನು ಸೃಷ್ಠಿಸಿದ ಅಸಲಾದ ದೈವವನ್ನೇ ಆರಾಧಿಸುವುದು ಸರಿಯಾದ ಪದ್ಧತಿ ಆಗುತ್ತದೆ.

ಈಗ ಆಧ್ಯಾತ್ಮಿಕವನ್ನು ಕುರಿತು ಸ್ವಲ್ಪ ತಿಳಿದುಕೊಳ್ಳೋಣ. ಆಧ್ಯಾತ್ಮಿಕ ಎನ್ನುವ ಮಾತನ್ನು ಬಹಳಜನ ಕೇಳಿಯೇ ಇರುತ್ತಾರೆ. ನಮ್ಮ ಸ್ವಾಮೀಜಿಗಳೆಲ್ಲರು ಬಳಸುವ ಪದ ಆಧ್ಯಾತ್ಮಿಕ. ಆಧ್ಯಾತ್ಮಿಕವನ್ನು ಕುರಿತು ಭಗವದ್ಗೀತೆಯಲ್ಲಿ ಭಗವಂತನು, ಆತ್ಮವನ್ನು ತಿಳಿದುಕೊಳ್ಳುವುದೇ ಆಧ್ಯಾತ್ಮಿಕವೆಂದು ಹೇಳಿದ್ದಾನೆ. ಆತ್ಮವನ್ನು ಅಧ್ಯಯನ ಮಾಡಿ ತಿಳಿದುಕೊಳ್ಳುವ ವಿಧಾನವನ್ನು ಆಧ್ಯಾತ್ಮಿಕವೆಂದು ಹೇಳಬಹುದು. ಇನ್ನೊಂದು ವಿಧದಲ್ಲಿ ಹೇಳಿಕೊಂಡರೆ ಆತ್ಮವನ್ನು ಧರ್ಮ ಯುಕ್ತವಾಗಿ ತಿಳಿದುಕೊಳ್ಳುವುದೆಂದೂ, ಆತ್ಮವನ್ನು ಶಾಸ್ತ್ರಬದ್ಧವಾಗಿ ತಿಳಿದು ಕೊಳ್ಳುವುದೆಂದೂ ಅನ್ನಬಹುದು. ಮುಖ್ಯ ವಿಷಯವೇನೆಂದರೆ ನೀನು ಯಾವ

ವಿಧದಲ್ಲಿ ತಿಳಿದುಕೊಂಡರೂ, ತಿಳಿದುಕೊಳ್ಳಬೇಕಾಗಿರುವುದು ಆತ್ಮವನ್ನು. ಈ ಆತ್ಮ ಎನ್ನುವ ಪದವನ್ನು ತಿಳಿಯದವರಾಗಲಿ, ಆ ಶಬ್ದವನ್ನು ಕೇಳದವರಾಗಲಿ ಬಹುಶಃ ಯಾರೂ ಇಲ್ಲವೇನೊ! ಏಕೆಂದರೆ! ಎಲ್ಲ ಮತಗಳಲ್ಲಿಯೂ ಅಲ್ಪಸ್ವಲ್ಪ ಆತ್ಮ ಎನ್ನುವ ಹೆಸರನ್ನು ಎಲ್ಲರೂ ಮಾತಾಡುತ್ತಲೆ ಇದ್ದಾರೆ. ಇದನ್ನನುಸರಿಸಿ ನೋಡಿದರೆ ಪ್ರತಿ ಮನುಷ್ಯನಿಗೆ ಆತ್ಮ ಎಂಬ ಮಾತು ಪರಿಚಯವಾದದ್ದೆ ಎಂದು ತಿಳಿಯುತ್ತದೆ. ನಾವು ಆಡುವ ಭಾಷೆಯಲ್ಲಿ ಎಷ್ಟೋ ಕಡೆ ಆತ್ಮ ಶಬ್ದವನ್ನು ಮಾತನಾಡುತ್ತಲೇ ಇದ್ದೇವೆ. ಇತ್ತ ಜ್ಞಾನಿಯಾಗಲಿ, ಅತ್ತ ಅಜ್ಞಾನಿಯಾಗಲಿ ನಿತ್ಯವೂ ಮಾತನಾಡುವ ಮಾತುಗಳಲ್ಲಿ ಆತ್ಮ ಎಂಬ ಪದ ಹೀಗಿದೆ. **ಆತ್ಮಜ್ಞಾನ, ಆತ್ಮದ್ರೋಹ, ಆತ್ಮಹತ್ಯೆ, ಆತ್ಮಬಲ, ಆತ್ಮವಿಮರ್ಶೆ, ಆತ್ಮಬಂಧು, ಆತ್ಮಶೋಕ, ಆತ್ಮದರ್ಶನ, ಆತ್ಮಸಾಕ್ಷಿ, ಆತ್ಮಾಹುತಿ, ಆತ್ಮಸಮರ್ಪಣೆ, ಆತ್ಮಚೈತನ್ಯ,** ಹೀಗೆ ಎಷ್ಟೋ ಪದಗಳಿವೆ. ಪ್ರತಿ ಮತದಲ್ಲಿಯೂ ಆತ್ಮ ಎನ್ನುವ ಪದ ಕೇಳಿಬರುತ್ತಲೆ ಇದೆ. ವಿಚಿತ್ರವಾದ ಸತ್ಯವೇನೆಂದರೆ ಎಷ್ಟೋ ಜನರಿಂದ ಎಷ್ಟೋ ಸಂದರ್ಭಗಳಲ್ಲಿ ಕೇಳಿಬರುವ ಆತ್ಮ, ಪ್ರತಿ ಮತದಲ್ಲಿಯೂ ಪ್ರತಿ ಬೋಧಕನು ಬೋಧಿಸುವ ಜ್ಞಾನದಲ್ಲಿಯೂ ಕೇಳಿಬರುವ ಆತ್ಮ, ದೈವ ಜ್ಞಾನದಲ್ಲಿಯು, ಪ್ರಪಂಚ ಜ್ಞಾನದಲ್ಲಿಯು ಜ್ಞಾನಿಗಳಿಂದಾಗಲಿ, ಅಜ್ಞಾನಿ ಗಳಿಂದಾಗಲಿ ಕೇಳಿಬರುವ ಆತ್ಮ, ಎಂತಹುದೊ, ಎಲ್ಲಿರುತ್ತದೊ, ಏನು ಮಾಡುತ್ತಿರುತ್ತದೊ, ಅದರ ಸ್ವರೂಪವೇನೋ, ಅದರ ಸ್ಥಿತಿಗತಿಗಳೇನೋ ಭೂಮಿ ಮೇಲೆ ಯಾರಿಗೂ ತಿಳಿಯದು. ಇಷ್ಟು ಜನರಿಂದ ಕೇಳಿಬರುತ್ತಿರುವ ಆತ್ಮವನ್ನು ಕುರಿತು ಸ್ವಾಮೀಜಿಗಳಾಗಲಿ, ಬಾಬಾಗಳಾಗಲಿ, ಬೋಧಕರಾಗಲಿ ತಿಳಿದುಕೊಂಡಿಲ್ಲ. ನನಗೆ ಆತ್ಮಜ್ಞಾನ ತಿಳಿದಿದೆಯೆಂದುಕೊಂಡ ಎಷ್ಟು ದೊಡ್ಡ ಬೋಧಕನಿಗಾಗಲಿ ಆತ್ಮವನ್ನು ಕುರಿತು ತಿಳಿದಿಲ್ಲವೆಂದು ಹೇಳುವುದು ವಿಚಿತ್ರವಾಗಿದೆಯಲ್ಲವೆ! ಹೌದು ವಿಚಿತ್ರವೆ ಮತ್ತೆ. ನಾನು ಆತ್ಮ ಜ್ಞಾನಿ, ನನಗೆ ಆತ್ಮ ತಿಳಿಯದೆ ಹೋಗುವುದೇನು ಎಂದು ಕೆಲವರು ಅಂದುಕೊಳ್ಳಬಹುದು. ನೀವು ಎಷ್ಟು ಗಾಢವಾಗಿ ಅಂದುಕೊಂಡರೂ ಎಲ್ಲರಿಗೂ ತಿಳಿಯದ ಸತ್ಯ **"ಆತ್ಮ ಯಾರಿಗೂ ತಿಳಿದಿಲ್ಲ"**.

ಒಂದು ದೆವ್ವವನ್ನು ನೋಡಿದವನು ನಾನು ಆತ್ಮವನ್ನು ನೋಡಿದ್ದೇನೆ ಅನ್ನುತ್ತಿದ್ದಾನೆ. ದೆವ್ವವನ್ನು ಆತ್ಮ ಅನ್ನಬಹುದಾ? ಅನ್ನಬಾರದು. ಆದರೂ ಎಲ್ಲರೂ ಹಾಗೆಯೆ ಅನ್ನುತ್ತಿದ್ದಾರೆ. ಕೆಲವು ಮತಗಳಲ್ಲಿ ದೆವ್ವವನ್ನು ಆತ್ಮ ಎಂದೇ ಹೇಳುತ್ತಿದ್ದಾರೆ. ಆತ್ಮ ಒಂದರ ನಿಜ ಸ್ವರೂಪ ತಿಳಿಯದ ಕೆಲವರು ಜೀವಾತ್ಮನನ್ನು ಆತ್ಮ ಎಂದು, ಮತ್ತೆ ಕೆಲವರು ದೇವರನ್ನು ಅತ್ಮ ಎಂದು ಅನ್ನುತ್ತಿದ್ದಾರೆ. **ಆದರೆ ಆತ್ಮ ಇತ್ತ ಜೀವಾತ್ಮವಾಗಲಿ, ಅತ್ತ ದೇವರಾಗಲಿ ಅಲ್ಲ ಎಂದು ತಿಳಿದಿಲ್ಲ**. ಆತ್ಮವನ್ನು ತಿಳಿದುಕೊಳ್ಳುವುದು ಅಥವಾ ಆತ್ಮವನ್ನು ಅಧ್ಯಯನ ಮಾಡುವುದು ಆಧ್ಯಾತ್ಮಿಕ ಆದರೆ, ಆತ್ಮ ಎಂದರೆ ಏನೋ ಯಾರಿಗೂ ತಿಳಿಯದಿರುವಾಗ, ಬೋಧಿಸುವ ಬೋಧಕರಾದ ಸ್ವಾಮೀಜಿಗಳಿಗೆ ತಿಳಿಯದಿರುವಾಗ ಆಧ್ಯಾತ್ಮಿಕ ಇವರೆಲ್ಲರಿಗೂ ತಿಳಿದಿದೆಯೆಂದು ಹೇಳಬಹುದಾ? ಆತ್ಮವನ್ನು ತಿಳಿಯದವನು ಆಧ್ಯಾತ್ಮಿಕನಲ್ಲ ಎನ್ನುವ ಸೂತ್ರದ ಪ್ರಕಾರ, ಭೂಮಿಮೇಲೆ ಯಾರು ಆಧ್ಯಾತ್ಮಿಕವನ್ನು ತಿಳಿದವರೋ ನೀವೆ ಲೆಕ್ಕಿಸಿ ನೋಡಿಕೊಳ್ಳಿ. ನಾವು ಇಲ್ಲಿ ಇರುವ ಸತ್ಯವನ್ನು ಹೇಳುತ್ತಿದ್ದೇವೆ ಆದರೆ ಯಾರನ್ನು ಉದ್ದೇಶಿಸಿ ಹೇಳುತ್ತಿಲ್ಲ. ಇಷ್ಟು ನಂಬಿಕೆಯಿಂದ ಹೇಗೆ ಹೇಳುತ್ತಿದ್ದೀರ ಎಂದು ನೀವು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ವೇನೆಂದರೆ! ನಾನು ಸೂತ್ರದ ಪ್ರಕಾರವೇ ಹೇಳುತ್ತಿದ್ದೇನೆ, ಆದರೆ ಸೂತ್ರವನ್ನು ಬಿಟ್ಟು ಶಾಸ್ತ್ರಬದ್ಧತೆಯಿಲ್ಲದ ವಿಧದಲ್ಲಿ ಹೇಳುತ್ತಿಲ್ಲ. ಕೆಲವರು ದೂರದಿಂದ ಹುಣಸೆ ಗಿಡವನ್ನು ನೋಡಿ ಬನ್ನಿಗಿಡವೆಂದು ಅಂದುಕೊಳ್ಳಬಹುದು. ಹಾಗೆ ಅವರಂದುಕೊಂಡಷ್ಟು ಮಾತ್ರಕ್ಕೆ ಹುಣಸೆಗಿಡ ಬನ್ನಿಗಿಡ ಆಗುತ್ತದೆಯೇ? ಹಾಗೆ ಬಹಳ ಜನ ಇತ್ತ ಜೀವಾತ್ಮನನ್ನಾಗಲಿ, ಅತ್ತ ಪರಮಾತ್ಮನನ್ನಾಗಲಿ ಆತ್ಮವೆಂದು ಭಾವಿಸಿಕೊಳ್ಳುತ್ತಿದ್ದಾರೆ. ಹಾಗೆ ಭಾವಿಸಿಕೊಂಡೆ ಬೋಧಿಸುತ್ತಿದ್ದಾರೆ. ಅಷ್ಟು ಮಾತ್ರಕ್ಕೆ ಅವರಂದುಕೊಂಡಹಾಗೆ ಆತ್ಮ ಜೀವಾತ್ಮವಲ್ಲ, ಹಾಗೆ ಆತ್ಮ ಪರಮಾತ್ಮವಲ್ಲ. ದೇವರು ಬೋಧಿಸಿದ ಬೋಧನೆಗಳಲ್ಲಾಗಲಿ, ಭಗವದ್ಗೀತೆಯಲ್ಲಾಗಲಿ ಆತ್ಮಗಳೆಂದು ಹೆಸರಾಗಿರುವವು ಮೂರೇ ಮೂರು ಇವೆಯೆಂದು ತಿಳಿದುಬಂದಿದೆ. ಆ ಮೂರು ಆತ್ಮಗಳನ್ನೇ ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16, 17

ಶ್ಲೋಕಗಳಲ್ಲಿ **ಕ್ಷರ, ಅಕ್ಷರ, ಪುರುಷೋತ್ತಮ**ರೆಂದು ಹೇಳಲಾಗಿದೆ. ಇದೇ **ನಮ್ಮ ತ್ರೈತಸಿದ್ಧಾಂತ**. ಸೂತ್ರದ ಪ್ರಕಾರ ಯಾರಿಗೆ ತ್ರೈತಸಿದ್ಧಾಂತ ತಿಳಿಯದೋ, ಯಾರು ತ್ರೈತಸಿದ್ಧಾಂತವನ್ನು ಒಪ್ಪಿಕೊಳ್ಳುವುದಿಲ್ಲವೋ ಅವರಿಗೆ ಆತ್ಮ ತಿಳಿಯದೆಂದರ್ಥ. ಅಂತಹವರು ಯಾರಾದರೂ ಅವರಿಗೆ ಆಧ್ಯಾತ್ಮಿಕವೇ ತಿಳಿಯದು. ಭೂಮಿಮೇಲೆ ಭಗವಾನರೆಂದು ಹೆಸರು ಇಟ್ಟುಕೊಂಡರೂ, ಸ್ವಾಮೀಜಿಗಳಾಗಲಿ, ಬಾಬಾಗಳಾಗಲಿ, ಗುರುವೆಂದು ಹೆಸರುಹೊಂದಿದವರಾಗಲಿ, ಆತ್ಮವನ್ನು ಕುರಿತು ತಿಳಿಯದವರು ಆಧ್ಯಾತ್ಮಿಕರಲ್ಲ. ಆತ್ಮ ಏನೋ ತಿಳಿಯದಿರುವಾಗ ಖಂಡಿತವಾಗಿ ಜೀವಾತ್ಮನನ್ನು ನೋಡಲಾರರು, ಪರಮಾತ್ಮನನ್ನು ತಿಳಿಯಲಾರರು. ಅಂತಹವರು ಜೀವಾತ್ಮನನ್ನು ಕುರಿತು ಹೇಳಬೇಕಾಗಿ ಬಂದಾಗ, ಅದರ ಸ್ಥಾನದಲ್ಲಿ ಪರಮಾತ್ಮನನ್ನು ಕುರಿತೋ, ಆತ್ಮನನ್ನು ಕುರಿತೋ ಹೇಳುತ್ತಾರೆ. ಹಾಗೇ ಆತ್ಮವನ್ನು ಕುರಿತು ಹೇಳಬೇಕಾಗಿ ಬಂದಾಗ, ಅವರಿಗೆ ತಿಳಿದಿರುವವು ಎರಡೇ ಆದ್ದರಿಂದ ಇತ್ತ ಪರಮಾತ್ಮನನ್ನೋ ಅತ್ತ ಜೀವಾತ್ಮನನ್ನೋ ಹೇಳುವರು. ಹಾಗಲ್ಲದೆ ಮೂರು ಆತ್ಮಗಳಾದ ಜೀವಾತ್ಮ, ಆತ್ಮ, ಪರಮಾತ್ಮರನ್ನು ತಿಳಿದವನೇ ನಿಜವಾದ ಜ್ಞಾನಿ.



# ಗುರು ಎಂದರೆ ಯಾರು?

ಇದಕ್ಕು ಮೊದಲು ಭಕ್ತಿಯನ್ನು ಕುರಿತು ಹೇಳಿಕೊಂಡಾಗ ಮೂಢಭಕ್ತಿ ಇರಬಾರದೆಂದುಕೊಂಡಿದ್ದೇವೆ. ಹಾಗೆ ಈಗ **ಭಗವದ್ಗೀತೆಯಲ್ಲಿನ ತ್ರೈತಸಿದ್ಧಾಂತ ವನ್ನು ತಿಳಿಯದವನು ಆಧ್ಯಾತ್ಮಿಕ ತಿಳಿಯದವನೆಂದಿದ್ದೇವೆ.** ಪ್ರಸ್ತುತವಾಗಿ ಗುರುವನ್ನು ಕುರಿತು ಹೇಳಿಕೊಳ್ಳಬೇಕಾಗಿದೆ. ವಿದ್ಯೆಯನ್ನು ಬೋಧಿಸುವವನು ಗುರುವೆಂದು ಬಹಳ ಜನ ಅಂದುಕೊಳ್ಳುತ್ತಿದ್ದಾರೆ. ನಾವು ಇಲ್ಲಿ ವಿದ್ಯೆಗಳನ್ನು, ಎರಡು ವಿಧಗಳಾಗಿ ವಿಭಜಿಸಿಕೊಂಡರೆ, ಒಂದು ಪ್ರಪಂಚ ವಿದ್ಯೆ, ಎರಡನೆಯದು ಪರಮಾತ್ಮ ವಿದ್ಯೆ ಎಂದು ತಿಳಿದುಕೊಂಡಿದ್ದೇವೆ. ಪ್ರಪಂಚ ವಿದ್ಯೆಗಳಲ್ಲಿ ಗುರು ಇರಬಹುದು, ಇರದೆಹೋಗಬಹುದು. ಆದರೆ ಪರಮಾತ್ಮ ವಿದ್ಯೆಯಲ್ಲಿ ತಪ್ಪದೆ ಗುರು ಇದ್ದೇ

ಇರಬೇಕೆಂದು ಸಹ ಹೇಳಿಕೊಂಡಿದ್ದೇವೆ. ಅದರ ಪ್ರಕಾರ ಪರಮಾತ್ಮ ವಿದ್ಯೆಯಲ್ಲಿ ಗುರು ಹೇಗಿರುತ್ತಾನೋ, ಯಾರು ಗುರುವೊ ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸೋಣ.

ಬ್ರಹ್ಮವಿದ್ಯೆ ಅಥವಾ ದೈವ ವಿದ್ಯೆ ಆದ ಪರಮಾತ್ಮ ಜ್ಞಾನವನ್ನು ಬೋಧಿಸುವವರು ಈ ದಿನ ಭೂಮಿಮೇಲೆ ಬಹಳ ಜನ ಇದ್ದಾರೆ. ಆದರೆ ಇವರೆಲ್ಲರೂ ಗುರುಗಳಾಗುತ್ತಾರಾ? ಎಂದು ಪ್ರಶ್ನಿಸಿಕೊಂಡು ನೋಡಿದರೆ **ಒಂದು ಪ್ರಾಂತದಲ್ಲಿ, ಒಂದು ಕಾಲದಲ್ಲಿ, ಒಬ್ಬ ವ್ಯಕ್ತಿಯಾಗಿ ಗುರುವಿರುತ್ತಾನೆ** ಅನ್ನುವ ಸೂತ್ರದ ಪ್ರಕಾರ ನಾವು ಗುರುಗಳೆಂದು ಎಷ್ಟೋ ಜನ ಹೆಸರು ವಾಸಿಯಾದರೂ, ಅವರಲ್ಲಿ ಒಬ್ಬನು ಮಾತ್ರ ಗುರುವಿರಬಹುದು. ಮೇಲಿನ ಸೂತ್ರದ ಪ್ರಕಾರ ಏಕ ಕಾಲದಲ್ಲಿ ಒಬ್ಬನಿಗಿಂತ ಮೀರಿ ಗುರುಗಳಿರುವುದಕ್ಕೆ ಅವಕಾಶವಿಲ್ಲ. ಒಂದು ಪ್ರಾಂತದಲ್ಲಿ ಎಂದಿದ್ದೇವೆ ಅದ್ದರಿಂದ ಭೂಮಂಡಲದಲ್ಲಿ ದೇಶಗಳೆಲ್ಲವನ್ನು ಸೇರಿಸಿ ನೋಡಿದರು ಒಂದು ದೇಶದಲ್ಲಿಯೆ ಒಬ್ಬನೇ ಗುರುವಿರುತ್ತಾನೆ. ಇದರ ಪ್ರಕಾರ ವಿಶ್ವವೆಲ್ಲದಕ್ಕು ಗುರು ಒಬ್ಬನೇ ಎಂದು ತಿಳಿಯುತ್ತದೆ. ದೈವಜ್ಞಾನವನ್ನು ತಿಳಿಸುವವರು ಎಷ್ಟುಜನರಿದ್ದರೂ ಅವರಲ್ಲಿ ಒಬ್ಬನು ಗುರು ಇರಬಹುದು. ದೇವರ ಜ್ಞಾನ ದೇವರಿಗೆ ಹೊರತು ಯಾವ ಇತರೆ ಮನುಷ್ಯನಿಗೆ ತಿಳಿಯದು. ದೈವಜ್ಞಾನ ಮನುಷ್ಯರಿಗೆ ತಿಳಿಯಬೇಕೆಂದರೆ ದೇವರೇ ಗುರುವಾಗಿ ಭೂಮಿಮೇಲೆ ಇದ್ದು ತನ್ನ ಜ್ಞಾನವನ್ನು ತಾನೇ ಹೇಳಬೇಕಾಗಿರುತ್ತದೆ. ಆತನೇ ನಿಜವಾದ ಗುರು. ದೇವರು ಭೂಮಿ ಮೇಲೆ ಯಾವಾಗ ಬರುತ್ತಾನೆಂದರೆ? ತನ್ನ ಧರ್ಮಗಳು ಭೂಮಿಮೇಲೆ ತಿಳಿಯದೇ ಹೋದಾಗ, ಅಧರ್ಮಗಳು ಪ್ರಜೆಗಳಲ್ಲಿ ಹಬ್ಬಿಕೊಂಡಾಗ, ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ ತನ್ನ ಧರ್ಮಗಳನ್ನು ತಿಳಿಸುವುದಕ್ಕೆ ತನಗೆ ತಾನಾಗಿ ಬರುವವನು ದೇವರು. ಆ ದೇವರೇ ನಿಜವಾದ ಗುರು. ಧರ್ಮಗಳಿಗೆ ಗ್ಲಾನಿ ಏರ್ಪಟ್ಟು ಅಧರ್ಮಗಳು ಭೂಮಿ ಮೇಲೆ ಹೆಚ್ಚಾಗುವುದಕ್ಕೆ ಕೆಲವು ಸಾವಿರ ಅಥವಾ ಕೆಲವು ಲಕ್ಷ ವರ್ಷಗಳ ಕಾಲ ಬೇಕಾಗುತ್ತದೆ. ಆದುದರಿಂದ ಗುರು ಭೂಮಿಮೇಲೆ ಲಕ್ಷ ವರ್ಷಗಳಿಗೋ, ಸಾವಿರ ವರ್ಷಗಳಿಗೋ ಬರಬಹುದು. ಭೂಮಿಮೇಲೆ ಜ್ಞಾನ ಹೇಳುವ

ಪ್ರತಿಯೊಬ್ಬನು ಗುರುವಾಗುವುದಕ್ಕೆ ಸಾಧ್ಯವಿಲ್ಲ. ಜ್ಞಾನ ಹೇಳುವ ಪ್ರತಿಯೊಬ್ಬನು ಬೋಧಕನು ಆಗಬಹುದು, ಆದರೆ ಗುರು ಎಂದಿಗೂ ಆಗಲಾರನು. ದೇವರು ಮನುಷ್ಯನಾಗಿ ಬಂದರೆ ಗುರು ಆಗುತ್ತಾನೆ, ಆದರೆ ಮನುಷ್ಯ ಎಂದಿಗೂ ಗುರು ಆಗುವುದಿಲ್ಲ. ಇಲ್ಲಿ ಕೆಲವರಿಗೆ ಅಥವಾ ಕೆಲವು ಮತಗಳವರಿಗೆ ಒಂದು ಪ್ರಶ್ನೆ ಬರಬಹುದು. ದೇವರು ದೇವರಾಗಿಯೆ ಇರುತ್ತಾನೆ, ಮನುಷ್ಯನಾಗಿ ಎಂದಿಗೂ ಬರುವುದಿಲ್ಲ, ಒಂದು ವೇಳೆ ಭೂಮಿಮೇಲೆ ಜ್ಞಾನ ಅಗತ್ಯವಾದರೆ ತನ್ನ ದೂತರನ್ನು ಕಳುಹಿಸಿ ಅವರಿಂದ ಜ್ಞಾನವನ್ನು ಹೇಳಿಸುವನು. ಆ ವಿಧದಲ್ಲಿ ದೇವರಿಂದ ಕಳುಹಿಸಲ್ಪಟ್ಟ ದೂತನನ್ನು ಪ್ರವಕ್ತ ಅನ್ನುತ್ತಿದ್ದೇವೆ. ಅಂತಹ ಪ್ರವಕ್ತನನ್ನು ಗುರು ಅನ್ನಬಹುದು. ಆದರೆ ದೇವರು ಭೂಮಿಮೇಲೆ ಬರುತ್ತಾನೆಂದು ನೀವು ಹೇಗೆ ಹೇಳುತ್ತಿದ್ದೀರೆಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! **ಪರಮ ಪವಿತ್ರ ಪರಿಶುದ್ಧ ಗ್ರಂಥವಾದ ಭಗವದ್ಗೀತೆಯಲ್ಲಿ** ಶ್ರೀಕೃಷ್ಣನು ಜ್ಞಾನವನ್ನು ಬೋಧಿಸುತ್ತಾ ***"ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಮ್, ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ"*** ಎಂದು ಹೇಳಿದ್ದಾನೆ. ಇದರ ಅರ್ಥ ಕೆಟ್ಟದ್ದನ್ನು ಮಾಡುವವರನ್ನು ಇಲ್ಲದ ಹಾಗೆ ಮಾಡುವುದಕ್ಕೆ, ಒಳ್ಳೆಯವರನ್ನು ಅಭಿವೃದ್ಧಿ ಮಾಡುವುದಕ್ಕೆ ಧರ್ಮಸಂಸ್ಥಾಪನೆ ನಿಮಿತ್ತವಾಗಿ ನಾನು ಸಂಭವಿಸುತ್ತೇನೆ ಎಂದಿದ್ದಾನೆ. ಇದನ್ನನುಸರಿಸಿ ನೋಡಿದರೆ ದೇವರು ಭೂಮಿಮೇಲೆ ಧರ್ಮವನ್ನು ಸ್ಥಾಪಿಸುವುದಕ್ಕಾಗಿ ಬರುತ್ತೇನೆಂದು ಹೇಳಿದಹಾಗೆ ಅಲ್ಲವೆ! ಎಂದು ಹೇಳಿದರೆ ಅದಕ್ಕೆ ಕೆಲವರು ಕೃಷ್ಣನು ದೇವರೆಂದು ನಿರೂಪಣೆ ಏನೆಂದು ಕೇಳುತ್ತಿದ್ದಾರೆ. ಇಂತಹ ಪ್ರಶ್ನೆ ಭವಿಷ್ಯತ್ತಿನಲ್ಲಿ ಬರುತ್ತದೆಂದು ತಿಳಿದ ದೇವರು, ತಾನು ದೇವರೆನ್ನುವ ವಿಷಯವನ್ನು ಇತರರು ತಿಳಿಯುವ ಹಾಗೆ ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ್ದಾನೆ. ಅಷ್ಟೇ ಅಲ್ಲದೆ ಕೃಷ್ಣನಾಗಿ ಬಂದಿರುವವನು ದೇವರೆಂದು ತಿಳಿದ ಭೀಷ್ಮನು ಕೃಷ್ಣನನ್ನು ಜಗದ್ಗುರು ಎಂದಿದ್ದಾನೆ.

ಇತರ ಮತಗಳ ಸೋದರರು, ಹಿರಿಯರು ಮುಖ್ಯವಾಗಿ ಗಮನಿಸಬೇಕಾಗಿರುವುದೇನೆಂದರೆ! ದೇವರು ವಿಶ್ವವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿದ್ದಾನೆ.

ಹಾಗೆ ವಿಶ್ವವ್ಯಾಪಿ, ಸರ್ವಧಾರಿಯಾದ ದೇವರು, ಎಲ್ಲಾಕಡೆ ಇಲ್ಲದೆಹೋಗಿ ಒಬ್ಬ ಮನುಷ್ಯನಾಗಿ ಬರುತ್ತಾನೆಂದು ನಾವು ಸಹ ಹೇಳುವುದಿಲ್ಲ. ವಿಶಾಲವಾದ ದೇವರಿಂದ ಒಂದು ಅಣುವಿನಷ್ಟು ಅಂಶ (ಭಾಗ) ಅಥವಾ ವಿಶಾಲವಾದ ದೇವರ ಶಕ್ತಿಯಿಂದ ಒಂದು ಅಣುವಿನಷ್ಟು ಶಕ್ತಿ ಒಬ್ಬ ಕಾಣಿಸುವ ಮನುಷ್ಯನಾಗಿ ಹುಟ್ಟುವುದನ್ನು ದೇವರ ಅವತಾರ ಅನ್ನುತ್ತಿದ್ದೇವೆ. ಅಂತಹವನನ್ನೇ **ಭಗವಂತನು ಅಥವಾ ಗುರು** ಅನ್ನುತ್ತಿದ್ದೇವೆ. ದೇವರಿಗಿರುವ ಅನೇಕ ಕೋಟ್ಯಾನುಕೋಟಿ ಅಂಶಗಳಲ್ಲಿ ಒಂದು ಅಂಶ ಹುಟ್ಟಿದರೆ ಅದೇ ಗುರು. ಇದನ್ನನುಸರಿಸಿ ನೋಡಿದರೆ ದೇವರು ಮನುಷ್ಯನಾಗಿ ಬರಬಹುದು ಎಂದಿದ್ದೇವೆ. ದೇವರು ಮನುಷ್ಯನಾಗಿ ಎಂದರೆ ಗುರುವಾಗಿ ಭೂಮಿ ಮೇಲೆ ಕಾಣಿಸಿದರೆ, ಆ ಸಮಯದಲ್ಲಿಯೇ ಅಸಲಾದ ಧರ್ಮಗಳಿಂದ ಕೂಡಿಕೊಂಡಿರುವ ಜ್ಞಾನ ಮಾನವರಿಗೆ ಆತನಿಂದ ತಿಳಿಯುವುದು. ಆದರೆ ಆತನು ಗುರುವಾಗಿ ಮಾತ್ರ ತಿಳಿದು ಬರುವುದಿಲ್ಲ. **ಆತನು ಮನುಷ್ಯರಿಗೆ ತಿಳಿದರೂ, ತಿಳಿಯದಿದ್ದರೂ ಆ ಸಮಯದಲ್ಲಿ ವಿಶ್ವಕ್ಕೆಲ್ಲಾ ಆತನೊಬ್ಬನೆ ಗುರು**. ಈ ವಿಧದಲ್ಲಿ ದೇವರೇ ಗುರು ಅಥವಾ ಗುರುವೇ ದೇವರೆಂದು ಹೇಳಬಹುದು. ಆದ್ದರಿಂದ ಯಾವ ಮನುಷ್ಯ ಗುರುವಾಗಿ ಬದಲಾಗುವುದಿಲ್ಲ ಎಂದು ಹೇಳಿದ್ದೇವೆ. ಭೂಮಿಮೇಲೆ ಕಾಣಿಸದ ದೇವರು ಕಾಣಿಸುವ ಗುರುವಾಗಿ ಬರಬಹುದು. ಆದರೆ ಕಾಣಿಸುವ ಮನುಷ್ಯ ಗುರುವಾಗಿ ಬದಲಾಗುವುದಿಲ್ಲ. ಗುರು ದೇವರೇ ಆಗುವನು, ಆತನ ದೈವತ್ವವನ್ನು ಕುರಿತು ಪೂರ್ವದ ಹಿರಿಯರು ಒಂದು ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾರೆ.

***"ದುರ್ಲಭಂ ತ್ರಿಷುಲೋಕೇಷು, ತಚ್ಛೃಣುಷ್ವ ಪದಾ ಮ್ಯಹಮ್,***
***ಗುರುಬ್ರಹ್ಮ ವಿನಾ ನಾನ್ಯಃ ಸತ್ಯಂ ಸತ್ಯಂ."***

**ಭಾವಾರ್ಥ :–** ತ್ರಿಲೋಕಗಳಲ್ಲಿ ವ್ಯಾಪಿಸಿ ತಿಳಿಯುವುದಕ್ಕೆ ದುರ್ಲಭವಾದ ದೇವರನ್ನು ಕುರಿತು ಹೇಳುತ್ತಿದ್ದೇನೆ ಕೇಳು. ಕಾಣಿಸುವ ಗುರುವೇ ಕಾಣಿಸದ ದೇವರು. ವಿಶ್ವವೆಲ್ಲವನ್ನು ಲೆಕ್ಕಿಸಿ ನೋಡಿದರೆ ಗುರುವನ್ನು ಬಿಟ್ಟು ಅನ್ಯವಾದದ್ದೇನು ಇಲ್ಲ. ಈ ಮಾತು ಎಂದೆಂದಿಗೂ ಸತ್ಯ! ಸತ್ಯ!!

**ವಿವರ :–** ದುರ್ಲಭವಾದವನು ದೇವರು ಒಬ್ಬನೇ. ಏಕೆಂದರೆ ಆತನಿಗೆ ಆಕಾರವಿಲ್ಲ, ಹೆಸರೂ ಇಲ್ಲ. ರೂಪನಾಮಗಳಿಲ್ಲದವನನ್ನು ಕಂಡುಕೊಳ್ಳುವುದು ದುಸ್ಸಾಧ್ಯ ಅಲ್ಲವೆ! ಒಂದು ವೇಳೆ ರೂಪ, ಹೆಸರು ಇಲ್ಲದಿದ್ದರೂ ಆತನಿಗೆ ಏನಾದರೂ ಒಂದು ಅಡ್ರಸ್ (ವಿಳಾಸ) ಇದೆಯಾ ಎಂದು ಯೋಚಿಸಿದರೆ ಇಲ್ಲಿ ಇದ್ದಾನೆ ಅಲ್ಲಿ ಇಲ್ಲ ಎನ್ನುವುದಕ್ಕೆ ಯಾವ ಅವಕಾಶವಿಲ್ಲದ ವಿಧದಲ್ಲಿ ಎಲ್ಲಾಕಡೆ ವ್ಯಾಪಿಸಿದ್ದಾನೆ. ನಾಮವಾಗಲಿ, ವಿಳಾಸವಾಗಲಿ ಇಲ್ಲದೆ, ಆಕಾರವಾಗಲಿ, ಅಂದವಾಗಲಿ ಇಲ್ಲದೆ, ಕಾಣಿಸದೆ ಎಲ್ಲಾಕಡೆ ಎಲ್ಲರಲ್ಲಿಯು ಇರುವ ದೇವರು ಒಂದು ಸಮಯದಲ್ಲಿ ತನಗೆ ಅವಶ್ಯಕತೆ ಇದ್ದಾಗ ಕಾಣಿಸುವ ಮಾನವಾಕಾರದಿಂದ ಬಂದರೆ, ಆ ಆಕಾರವನ್ನೇ ಗುರು ಅನ್ನುತ್ತಿದ್ದೇವೆ. ದೇವರೆ ಗುರುವಾದಾಗ ಗುರುವನ್ನು ಮೀರಿರುವುದೇನು ಪ್ರಪಂಚದಲ್ಲಿ ಇಲ್ಲ. ಈ ಮಾತು ಪೂರ್ತಿ ಸತ್ಯವಾದದ್ದು ಎಂದು ಶ್ಲೋಕದಲ್ಲಿ ಹಿರಿಯರು ಹೇಳಿದ್ದಾರೆ. ಆ ದಿನ ಹಿರಿಯರು ಹೇಳಿದ ವಿಷಯವನ್ನೇ ನಾವು ಸಹ ಬಲಪಡಿಸುತ್ತೇವೆ ದೇವರು ಗುರುವಾಗಿ ಬರುತ್ತಾನೆ ಹೊರತು, ಯಾವ ಮನುಷ್ಯನೂ ಗುರುವಾಗಿ ಇರುವುದಕ್ಕೆ ಅವಕಾಶವಿಲ್ಲ. ದೇವರು ಗುರು, ಗುರು ದೇವರು ಆಗಬಹುದಾಗಲಿ ಮನುಷ್ಯನನ್ನು ಗುರುವೆಂದುಕೊಳ್ಳುವುದು ಪೂರ್ತಿ ಅಜ್ಞಾನವಾಗುತ್ತದೆ. ಒಂದು ವೇಳೆ ಯಾವ ಮನುಷ್ಯನಾದರು ತಾನು ಗುರುವೆಂದು ಪ್ರಕಟಿಸಿಕೊಂಡರೆ ಆತನು ಎಂತಹವ ನಾದರೂ ಆತನನ್ನು ಗುರುವಿನ ವಿವರ ತಿಳಿಯದ ಅಜ್ಞಾನಿಯೆಂದೆ ಹೇಳಬಹುದು.

ಇಲ್ಲಿಯವರೆಗೂ ಗುರುವನ್ನು ಕುರಿತು ಬರೆದಿರುವವರು ಈಗ ನಾವು ಹೇಳಿದ ವಿಧದಲ್ಲಿ ಗುರು ಮನುಷ್ಯನಾಗಿ ಬರಬಹುದೆಂದೆನ್ನದಂತೆ, ಮನುಷ್ಯ ಗುರುವಾಗಿ ಬದಲಾಗುತ್ತಾನೆಂದು ಹೇಳಿದ್ದಾರೆ. ಹುಟ್ಟಿದ ಮನುಷ್ಯರು ಯಾರೂ ಗುರುವಾಗಿ ಬದಲಾಗುವುದಿಲ್ಲವೆಂದು ಅವರಿಗೆ ತಿಳಿಯದೆ ಹಾಗೆ ಬರೆದಿರ ಬಹುದು. ಹುಟ್ಟಿದ ಮನುಷ್ಯ ಗುರುವಾಗಿ ಬದಲಾಗುವುದು ದುರ್ಲಭ. ಯಾವಾಗಲಾದರು ಸಂಭವಿಸಿದರೆ ದೇವರು ಗುರುರೂಪವಾಗಿ ಎಂದರೆ ಮನುಷ್ಯನಾಗಿ ಬರಬಹುದು. ಆ ವಿಧದಲ್ಲಾದರೂ ಗುರು ಯಾವಾಗಲೂ

ಭೂಮಿಮೇಲೆ ಇರುವುದಿಲ್ಲ. ಆತನಿಗೆ ಅವಶ್ಯವಾದಾಗ, ಧರ್ಮಗಳನ್ನು ತಿಳಿಸುವ ನಿಮಿತ್ತ ಮಾತ್ರವೆ ಬಂದು, ಸಂದರ್ಭ ನೋಡಿ ಧರ್ಮಗಳನ್ನು ತಿಳಿಸಿ ಹೋಗುವನು. ಅಂತಹ ಗುರುವು ತಾನು ಗುರುವೆನ್ನುವ ಗುರುತು ಸ್ವಲ್ಪವೂ ತಿಳಿಯದೆ ಪ್ರಜೆಗಳ ಮಧ್ಯದಲ್ಲಿ ಇರುವನು. ಆತನು ಹೇಳಿದ ಬೋಧನೆಯನ್ನು ನೋಡಿ ಇದು ಸಾಧಾರಣ ಮನುಷ್ಯ ಹೇಳುವ ಜ್ಞಾನ ಅಲ್ಲವೆಂದು, ಇದನ್ನು ಒಬ್ಬ ಗುರು ಅಲ್ಲದೆ ಯಾರೂ ಹೇಳುವುದಿಲ್ಲವೆಂದು, ಯಾರಾದರು ತಿಳಿವಳಿಕೆ ಇರುವವರು ಮನುಷ್ಯನಾಗಿರುವ ಗುರುವನ್ನು ಗ್ರಹಿಸಿದರೆ ನಿಜವಾದ ಗುರು ಅವನನ್ನು ಆ ಭಾವನೆಯಿಂದ ತಪ್ಪಿಹೋಗುವಂತೆ ಮಾಡಬಲ್ಲನು. ಗುರು ಕೃಷ್ಣನೆನ್ನುವ ಮನುಷ್ಯನಾಗಿ ಬಂದಾಗ, ಕೃಷ್ಣನ ಬೋಧನೆಯನ್ನು ನೋಡಿ ಈತನು ನಿಜವಾದ ದೇವರೆಂದು ಕೆಲವರು ಗ್ರಹಿಸಿದರೆ, ಆತನ ಪ್ರವರ್ತನೆಯನ್ನು ನೋಡಿ ಕೃಷ್ಣನನ್ನು ಸಾಧಾರಣ ಮನುಷ್ಯನೆಂದು ಕೆಲವರು, ಮೋಸಗಾರನೆಂದು ಕೆಲವರು, ಜಾರನೆಂದು ಕೆಲವರು, ಚೋರನೆಂದು ಕೆಲವರು ಅಂದುಕೊಂಡಿದ್ದಾರೆ. ಕೆಲವರು ತಿಳಿವಳಿಕೆ ಇರುವವನೆಂದು ಲೆಕ್ಕಿಸಿದರೆ, ಕೆಲವರು ದೊಡ್ಡಜ್ಞಾನಿಯೆಂದು ಲೆಕ್ಕಿಸಿಕೊಂಡಿದ್ದಾರೆ. ಆದರೆ ದೈವಾಂಶ ತುಂಬಿದ ಗುರುವೆಂದು, ದೇವರೆಂದು ಅಂದುಕೊಳ್ಳಲಿಲ್ಲ. ಆ ಕಾಲದಲ್ಲಿ ಭಗವದ್ಗೀತೆಯನ್ನು ಕೇಳಿ, ವಿಶ್ವರೂಪವನ್ನು ನೋಡಿದ ಅರ್ಜುನನಿಗೆ ಕೂಡ ಕೃಷ್ಣನು ದೇವರು ಅಲ್ಲವೆಂದು ಅನುಮಾನ ಬಂದಾಗ ಕೃಷ್ಣನನ್ನು ಮೇಧಾವಿಯಾಗಿ ಮಾತ್ರ ಅರ್ಜುನ ಅಂದುಕೊಂಡಿದ್ದಾನೆ ಹೊರತು ಗುರುವೆಂದಾಗಲಿ, ದೇವರೆಂದಾಗಲಿ ಗುರುತಿಸಲಿಲ್ಲ. ಆದರೆ ಆ ದಿನ ಭೀಷ್ಮನು ಕೃಷ್ಣನ ಗೀತೆಯನ್ನು ಕೇಳದಿದ್ದರೂ, ಆತನ ವಿಶ್ವರೂಪವನ್ನು ನೋಡದಿದ್ದರೂ ಕೃಷ್ಣನನ್ನು ನಿಜವಾದ ದೇವರೆಂದು, ಸೃಷ್ಟಿಕರ್ತನೆಂದು, ಜಗದ್ಭರ್ತನೆಂದು ಜಗದ್ಗುರುವೆಂದು ಲೆಕ್ಕಿಸಿದ್ದಾನೆ. ಬಹಳ ಸಂದರ್ಭಗಳಲ್ಲಿ ಕೃಷ್ಣನು ಸಾಧಾರಣ ಮನುಷ್ಯನಲ್ಲವೆಂದು ಇತರರಿಗೆ ಸಹ ಹೇಳಿದ್ದಾನೆ. ಭೀಷ್ಮನ ವಿಶ್ವಾಸದ ಮುಂದೆ ಯಾವ ಮಾಯೆ ಕೆಲಸ ಮಾಡಲಿಲ್ಲ. ಇದರಿಂದ ವಿಶ್ವಾಸ ಲೋಪವಿದ್ದರೆ ಗುರುವನ್ನು ಯಾರೂ ಗುರುತಿಸದ ಹಾಗೆ ತನ್ನ ಮಾಯೆಯಿಂದ

ಅನುಮಾನವನ್ನು ಹೆಚ್ಚಿಸುವುದು. ಸಂಪೂರ್ಣ ವಿಶ್ವಾಸಿಯನ್ನು ಮಾತ್ರ ತನ್ನಿಂದ ದೂರ ಮಾಡುವುದಿಲ್ಲವೆಂದು ತಿಳಿಯುತ್ತದೆ. ಗುರುವನ್ನು ಭೂಮಿಮೇಲೆ ಯಾರೂ ಗುರುತಿಸುವುದಿಲ್ಲ ಅನ್ನುವುದಕ್ಕೆ ಅವಕಾಶವಿಲ್ಲದೆ ದೇವರ ಮೇಲೆ ಶ್ರದ್ಧೆ ವಿಶ್ವಾಸ ಇರುವವರು ಗುರುತಿಸಬಲ್ಲರೆಂದು ಹೇಳುವುದಕ್ಕೆ ಭೀಷ್ಮನು ತಾರ್ಕಾಣವಾಗಿ ನಿಂತಿದ್ದಾನೆ.



# ಗುರುವನ್ನು ಕುರಿತು ಹಿರಿಯರು ಏನು ಹೇಳಿದ್ದಾರೆ?

**ಶ್ಲೋ॥ ಓಂ ಗುರುಬ್ರಹ್ಮ ಗುರುವಿಷ್ಣು ಗುರುದೇವೋ ಮಹೇಶ್ವರಃ**
**ಗುರುಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ**

**ಭಾವಾರ್ಥ :–** ಗುರುವೇ ಬ್ರಹ್ಮ, ಗುರುವೇ ವಿಷ್ಣು, ಗುರುವೇ ಮಹೇಶ್ವರ. ಇನ್ನೂ ಸತ್ಯ ಹೇಳಬೇಕೆಂದರೆ ಗುರುವೇ ಆತ್ಮಕ್ಕಿಂತ ಬೇರೆಯಾದ ಮೂರನೆ ಪುರುಷ ನಾಗಿರುವ ಪರಮಾತ್ಮ. ನಿರಾಕಾರನಾಗಿರುವವನಾಗಿ ಸಾಕಾರವಾಗಿ ಬಂದಿರುವ ಗುರುವಿಗೆ ನಾನು ನಮಸ್ಕರಿಸುತ್ತಿದ್ದೇನೆ.

**ವಿಶೇಷಾರ್ಥ :–** ದೇವತೆಗಳೆಲ್ಲರಿಗು ಸಾಕಾರವಿದೆ. ಬ್ರಹ್ಮನಾಗಲಿ, ಶಿವನಾಗಲಿ, ವಿಷ್ಣುವಾಗಲಿ ಶರೀರವನ್ನು ಧರಿಸಿ ಅದರಲ್ಲಿನ ಆತ್ಮವನ್ನು ಆಧಾರ ಮಾಡಿಕೊಂಡು ಚಲಿಸುವವರೆ. ಆತ್ಮ ಎಲ್ಲ ದೇಹಗಳಲ್ಲಿಯು ಇದೆ. ಗುರು ಆತ್ಮ ಸ್ವರೂಪನಾಗಿ ಬ್ರಹ್ಮ ಶರೀರದಲ್ಲಿಯು, ವಿಷ್ಣು ಶರೀರದಲ್ಲಿಯು, ಮಹೇಶ್ವರನ ಶರೀರದಲ್ಲಿಯು ಇದ್ದಾನೆ. ಆದ್ದರಿಂದ ಗುರುವನ್ನು ಬ್ರಹ್ಮನಾಗಿ, ವಿಷ್ಣುವಾಗಿ, ಶಿವನಾಗಿ ಹೇಳಲಾಗಿದೆ. ಗುರು ಒಂದನೆ ಆತ್ಮ (ಕ್ಷರ) ನಾಗಿ, ಎರಡನೆ ಆತ್ಮ (ಅಕ್ಷರ) ನಾಗಿ, ಮೂರನೆ ಆತ್ಮ (ಪರಮಾತ್ಮ) ನಾಗಿ ಇದ್ದಾನೆ. ಆದ್ದರಿಂದ ಗುರು ಸಾಕಾರ ಜೀವಿಯು, ನಿರಾಕಾರ ಆತ್ಮ ಮತ್ತು ಜೀವಾತ್ಮ, ಆತ್ಮಗಳಿಗಿಂತ ಬೇರೆಯಾದ ಪರಮಾತ್ಮನಾಗಿ ಇದ್ದಾನೆ. ಮೂರು ಆತ್ಮಗಳಾಗಿ ಇರುವವನೇ ನಿಜವಾದ, ನಿತ್ಯವಾದ ಗುರು.

ಆತನು ಧರಿಸಿದ ಶರೀರ ಪವಿತ್ರವಾದದ್ದು. ಆದ್ದರಿಂದ ಆ ಸಾಕಾರ ಗುರುವಿಗೆ ನಮಸ್ಕರಿಸುತ್ತಿದ್ದೇವೆ.

***ಶ್ಲೋ॥ ಓಂ ಅಖಂಡ ಮಂಡಲಾಕಾರಂ ವ್ಯಾಪ್ತಂ ಏನ ಚರಾಚರಂ***
***ತತ್ವದಂ ದರ್ಶಿತಂ ಏನ ತಸ್ಮೈ ಶ್ರೀ ಗುರವೇ ನಮಃ***

**ಭಾವಾರ್ಥ :–** ಅಂಡ, ಪಿಂಡ, ಬ್ರಹ್ಮಾಂಡವೆಲ್ಲವೂ ವ್ಯಾಪಿಸಿ ವಿಶ್ವರೂಪವೆ ತನ್ನ ಆಕೃತಿಯಾಗಿ ಹೊಂದಿ ಅಖಂಡವಾಗಿ ವ್ಯಾಪಿಸಿ ಇರುವವನು ಯಾರೋ, ಕದಲುತ್ತಿರುವ ಕದಲದೆ ಇರುವ ಜೀವರಾಶಿಗಳಲ್ಲಿಯು ಮತ್ತು ಬದಲಾವಣೆ ಯಾಗದ ಪಂಚಭೂತಗಳಲ್ಲಿಯು ವ್ಯಾಪಿಸಿರುವವನು ಯಾರೋ, ಪರಮಾತ್ಮ ಸ್ಥಾನವನ್ನು ತಿಳಿದಿರುವವನು ಯಾರೋ ಆ ಗುರುವಿಗೆ ನಮಸ್ಕರಿಸುತ್ತಿದ್ದೇನೆ.

***ಶ್ಲೋ॥ ಓಂ ಮನ್ನಾಥೋ ಶ್ರೀ ಜಗನ್ನಾಥ, ಮದ್ಗುರು ಶ್ರೀ ಜಗದ್ಗುರು***
***ಮಮಾತ್ಮ ಸರ್ವಭೂತಾತ್ಮ ತಸ್ಮೈ ಶ್ರೀ ಗುರವೇನಮಃ***

**ಭಾವಾರ್ಥ :–** ನನ್ನ ನಾಥನಾದ ಗುರುವೇ ಜಗತ್ತೆಲ್ಲದಕ್ಕು ನಾಥನು. ನನ್ನ ಗುರುವೇ ಜಗತ್ತಿನಲ್ಲಿನ ಸರ್ವ ಜೀವರಾಶಿಗಳಿಗೆ ಅನ್ವಯಿಸುವ ಜ್ಞಾನವನ್ನು ಬೋಧಿಸುವ ಜಗತ್‌ಗುರು. ನನ್ನ ಶರೀರದಲ್ಲಿ ಆತ್ಮವಾಗಿರುವ ಗುರುವೇ, ಸರ್ವ ಜೀವಿಗಳ ಶರೀರದಲ್ಲಿ ಆತ್ಮವಾಗಿ ಇದ್ದಾನೆ. ಆ ಗುರುವಿಗೆ ನನ್ನ ನಮಸ್ಕಾರ.

***ಶ್ಲೋ॥ ಓಂ ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ***
***ಚಕ್ಷುರುನ್ಮಿಲಿತಂ ಏನ ತಸ್ಮೈ ಶ್ರೀ ಗುರವೇನಮಃ***

**ಭಾವಾರ್ಥ :–** ಅಜ್ಞಾನವೆನ್ನುವ ಕುರುಡುತನಕ್ಕೆ ಜ್ಞಾನವೆನ್ನುವ ಕಾಡಿಗೆ (ಕಣ್ಣಿಗೆ ಹಚ್ಚುವ ಲೇಪನ) ಯನ್ನು ತಿದ್ದಿ, ಆತ್ಮನನ್ನು ದೃಶ್ಯವಾಗಿ ತೋರಿಸುವ ಗುರುವಿಗೆ ನಮಸ್ಕರಿಸುತ್ತಿದ್ದೇನೆ.

***ಶ್ಲೋ॥ ಓಂ ಬ್ರಹ್ಮಾನಂದಂ, ಅಚಲ ಪೂರ್ಣಂ, ತ್ರಿಗುಣಾತೀತಂ,***
***ಆತ್ಮಸಾಕ್ಷಾತ್ಕಾರಂ ಅದ್ವೈತಾನಂದಮೂರ್ತಿಂ***
***ಆನಂದ ನಿತ್ಯಸದ್ಗುರುಂ ತಂ ನಮಾಮಿ.***

**ಭಾವಾರ್ಥ :–** ಎಲ್ಲವನ್ನು ಮೀರಿದ ಆನಂದವನ್ನು ಹೊಂದಿದವನು, ಬದಲಾಗದಿರುವುದರೊಂದಿಗೆ ತುಂಬಿದವನು, ಮೂರು ಗುಣಗಳ ಕರ್ಮ ಅಂಟದವನು, ಆತ್ಮವನ್ನು ಸಾಕ್ಷಾತ್ಕರಿಸುವಂತೆ ಮಾಡಿಕೊಂಡವನು, ಎರಡು ಅಲ್ಲದ ಒಂದಾದ ಪರಮಾತ್ಮನಲ್ಲಿ ಮೂರ್ತೀ ಭವಿಸಿದವನು, ನಿತ್ಯವೂ ಆತ್ಮಾನಂದವನ್ನು ಹೊಂದುವವನಾದ ಸದ್ಗುರುವಿಗೆ ನಾನು ನಮಸ್ಕರಿಸುತ್ತಿದ್ದೇನೆ.

***ಶ್ಲೋ॥*** ***ಓಂ ನಿತ್ಯಾನಂದಂ, ಪರಮಸುಖದಂ, ಕೇವಲಂ ಜ್ಞಾನ ಮೂರ್ತಿಂ,***
***ದ್ವಂದ್ವಾತೀತಂ, ಗಗನ ಸದೃಶಂ, ತತ್ವಮಸ್ಯಾದಿ ಲಕ್ಷ್ಯಂ,***
***ಏಕಂ ನಿತ್ಯಂ ವಿಮಲ ಮಚಲಂ, ಸರ್ವಧೀ ಸಾಕ್ಷಿಭೂತಂ,***
***ಭಾವಾತೀತಂ, ತ್ರಿಗುಣ ರಹಿತಂ ಸದ್ಗುರುಂ ತಂ ನಮಾಮಿ.***

**ಭಾವಾರ್ಥ :–** ನಿತ್ಯವು ಆತ್ಮಾನುಭವ ಎನ್ನುವ ಆನಂದದಿಂದ ಕೂಡಿದವನು, ಜೀವನಿಗಿಂತ ಬೇರೆಯಾಗಿರುವ ಆತ್ಮ ಸುಖವನ್ನುಂಟುಮಾಡುವವನು ಕೇವಲ ಆತ್ಮಜ್ಞಾನವೇ ಸ್ವರೂಪವಾಗಿ ಹೊಂದಿದವನು, ಪಾಪ ಪುಣ್ಯಗಳಾದ ದ್ವಂದ್ವಗಳಿಗತೀತನು, ಆಕಾಶದ ಹಾಗೆ ವ್ಯಾಪಿಸಿ ಏನನ್ನು ಅಂಟದವನು, ತತ್ತ್ವಮಸ್ಯಾದಿ ವಾಕ್ಯಗಳ ಧ್ಯೇಯವನ್ನು ಹೊಂದಿರುವವನು, ಎಂದಿಗೂ ಏಕ ಸ್ವರೂಪವಾದವನು, ಪಾಪ ಪುಣ್ಯವೆನ್ನುವ ಯಾವ ಮಾಲಿನ್ಯ ಇಲ್ಲದವನು, ಚಲನೆ (ಬದಲಾವಣೆ) ಇಲ್ಲದವನು, ಸಮಸ್ತ ಜೀವರಾಶಿಗಳ ಬುದ್ಧಿಗೆ ಸಾಕ್ಷಿಯಾಗಿರುವವನು, ಯಾವ ಭಾವನೆಗು ಸಿಗದವನು, ಮೂರು ಗುಣ ಗಳಲ್ಲಿದ್ದರೂ ಅವುಗಳಿಗೆ ಅತೀತನಾದವನಾದ ಸದ್ಗುರುವಿಗೆ ನಮಸ್ಕರಿಸುತ್ತಿದ್ದೇನೆ.

***ಶ್ಲೋ॥*** ***ಅನೇಕ ಜನ್ಮ ಸಂಪ್ರಾಪ್ತ ಕರ್ಮಬಂಧ ವಿದಾಹಿನೇ***
***ಜ್ಞಾನಾನಲ ಪ್ರಭಾವೇನ ತಸ್ಮೈ ಶ್ರೀ ಗುರವೇನಮಃ.***

**ಭಾವಾರ್ಥ :–** ಬಹು ಜನ್ಮಗಳಿಂದ ಸೇರಿಕೊಂಡ ಪಾಪ, ಪುಣ್ಯ ಮಿಶ್ರಣಗಳನ್ನು ಜ್ಞಾನವೆಂಬ ಅಗ್ನಿಯಿಂದ ದಹಿಸುವಂತೆ ಮಾಡುವ ಗುರುಮೂರ್ತಿಗೆ ನಾನು ನಮಸ್ಕರಿಸುತ್ತಿದ್ದೇನೆ.

***ಶ್ಲೋ॥ ಓಂ ಸಚ್ಚಿದಾನಂದ ರೂಪಾಯ ವ್ಯಾಪಿನೇ ಪರಮಾತ್ಮನೇ,***
***ನಮಃ ಶ್ರೀ ಗುರುನಾಥಾಯ ಪ್ರಕಾಶಾನಂದ ಮೂರ್ತಯೇ.***

**ಭಾವಾರ್ಥ :–** ಸತ್, ಚಿತ್ ಒಂದರ ಆನಂದವನ್ನೇ (ಚಿತ್‌ನಲ್ಲಿ ಸತ್ತನ್ನು ಅನುಭವಿಸುವ ಆನಂದವನ್ನೇ) ಸ್ವರೂಪವಾಗಿ ಇರುವವನು, ಜೀವಾತ್ಮನಾಗಿದ್ದು ಆತ್ಮ ಸ್ಥಾನವನ್ನು, ಪರಮಾತ್ಮ ಸ್ಥಾನವನ್ನು ವ್ಯಾಪಿಸಿರುವವನು, ಎಲ್ಲದಕ್ಕು ಪ್ರಕಾಶಕೊಡುವ ಶಕ್ತಿಯನ್ನು ಅನುಭವಿಸುವವನು ಆದ ಗುರುವಿಗೆ ನಮಸ್ಕಾರ.

***ಶ್ಲೋ॥ ಓಂ ಗುರುರೇಕೋ ಜಗತ್ಸರ್ವಂ ಬ್ರಹ್ಮ, ವಿಷ್ಣು, ಶಿವಾತ್ಮಕಂ,***
***ಗುರೋಃ ಪರತರಂ ನಾಸ್ತಿ ತಸ್ಮಾಸ್ಥಂ ಪೂಜ ಯೇದ್ಗುರುಂ.***

**ಭಾವಾರ್ಥ :–** ಗುರುವೇ ಬ್ರಹ್ಮ, ವಿಷ್ಣು, ಶಿವ ಇವರ ಆತ್ಮವಾಗಿ ಇರುವವನು, ಗುರು ಒಬ್ಬನೇ ಜಗತ್ತೆಲ್ಲಾ ತುಂಬಿ ಸರ್ವವಾಗಿ ಇರುವವನು. ಗುರುವಿಗಿಂತ ಮೀರಿದ ಬೇರೆಯಾದ ಮೋಕ್ಷವಿಲ್ಲ. ಆದ್ದರಿಂದ ಗುರುವನ್ನು ಎಲ್ಲ ವಿಧಗಳಲ್ಲಿ ಪೂಜಿಸಬೇಕು.



# ಶ್ರೀ ಸದ್ಗುರು ಪಾದುಕಾಸ್ತವಮ್

***1. ಶ್ಲೋ॥ ಶ್ರೀ ಸಮಂಚಿತ ಮವ್ಯಯಂ ಪರಮ ಪ್ರಕಾಶಮಗೋಚರಂ***
***ಭೇದವರ್ಜಿತ ಮಪ್ರಮೇಯ ಮನಂತ ಮಾದ್ಯಮ ಕಲ್ಮಷಂ!***
***ನಿರ್ಮಲಂ ನಿಗಮಾನ್ತ ಮದ್ವಯ ಮಪ್ರತರ್ಕ್ಯಮ ಬೋಧಕಂ***
***ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!***

**ಭಾವಾರ್ಥ :–** ಶುಭಕರವಾದದ್ದು, ನಾಶವಿಲ್ಲದ್ದು, ನಿನಗಿಂತ ಬೇರೆಯಾಗಿ ಇದ್ದು ನಿನಗೆ ತಿಳಿಯದೆ ಇರುವುದು, ಭೇದ ವಿಲ್ಲದೆ ಎಲ್ಲಾಕಡೆ ತುಂಬಿರುವುದು, ಪ್ರಮಾಣಗಳಿಗೆ ತಿಳಿಯದಿರುವುದು, ಆದಿ ಮೊದಲು ಇಲ್ಲದಿರುವುದು, ಕರ್ಮ ಕಾಲುಷ್ಯ ಇಲ್ಲದಿರುವುದು, ನಿರ್ಮಲವಾಗಿ, ವೇದಾಂತ ಸಾರವಾಗಿ, ದ್ವಂದ್ವಗಳು

ಇಲ್ಲದಾಗಿ ಬೋಧಿಸುವುದಕ್ಕೆ ಬುದ್ಧಿಗೆ ಸಾಧ್ಯವಾಗದ ಗುರುಪಾದಗಳನ್ನು ಪ್ರಾತಃಕಾಲದಲ್ಲಿಯೇ ಮನಸ್ಸಿನಲ್ಲಿ ಧ್ಯಾನಿಸುವೆನು.

*2. ಶ್ಲೋ॥ ನಾದಬಿಂದು ಕಳಾತ್ಮಕಂ ದಶನಾದ ಭೇದ ವಿನೋದಕಂ*
*ಮಂತ್ರರಾಜ ವಿರಾಜಿತಂ ನಿಜಮಂಡಲಾನ್ತರ್ಭಾಸಿತಮ್!*
*ಪಂಚವರ್ಣಮಖಂಡ ಮದ್ಭುತ ಮಾದಿ ಕಾರಣ ಮಚ್ಯುತಂ*
*ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ಶಬ್ಧ, ರೂಪವೆನ್ನುವ ತನ್ಮಾತ್ರಗಳಿಗೆ ಶಕ್ತಿಕೊಡುವ ಆತ್ಮವಾಗಿ ಇದೆ. ಶಬ್ಧದಿಂದ ಹತ್ತು ವಿಧಗಳಾದ ನಾದಗಳನ್ನು ಹುಟ್ಟಿಸಿ ವಿನೋದವನ್ನು ಉಂಟುಮಾಡುವುದು ಮಂತ್ರರಾಜನಾದ "ಓಂ" ಕಾರ ಶಬ್ಧವನ್ನು ಹುಟ್ಟಿಸಿ ಅದರಿಂದ ಪ್ರಕಾಶಿಸುವುದು, ನಿಜ ಮಂಡಲವಾದ ಬ್ರಹ್ಮನಾಡಿಯೊಳಗೆ ನಿವಾಸಿಸುವುದು, ಪಂಚ ಭೂತಗಳಲ್ಲಿಯು ಅಖಂಡವಾಗಿ, ಅದ್ಭುತವಾಗಿ ವ್ಯಾಪಿಸಿ ಮೂಲ ಕಾರಣವಾಗಿ ಅರ್ಥವಾಗದೆ ಇರುವ ಗುರುಪಾದಗಳನ್ನು ನಿರ್ಮಲ ಕಾಲದಲ್ಲಿ ಮನಸ್ಸಿನಲ್ಲಿ ಧ್ಯಾನಿಸುವೆನು.

*3. ಶ್ಲೋ॥ ವ್ಯೋಮವದ್ಬಹಿರಂತ ರಸ್ಥಿತ ಮಕ್ಷರಂ ನಿಖಿಲಾತ್ಮಕಮ್*
*ಕೇವಲಂ ಪರಿಶುದ್ಧಮೇಕಮಜನ್ಮಹಿ ಪ್ರತಿರೂಪಕಂ!*
*ಬ್ರಹ್ಮ ತತ್ತ್ವ ವಿನಿಶ್ಚಯಂ ನಿರತಾನು ಮೋಕ್ಷ ಸುಬೋಧಕಮ್*
*ಪ್ರಾತರೇವ ಹಿಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ಸರ್ವ ಜೀವರಾಶಿಗಳಲ್ಲಿ ನಾಶವಾಗದಿರುವುದು, ಆಕಾಶದ ಹಾಗೆ ಒಳಗೆ ಹೊರಗೆ ವ್ಯಾಪಿಸಿರುವುದು, ಪ್ರತಿಯೊಂದು ತನ್ನ ರೂಪವಾಗಿ, ವಿಶ್ವರೂಪವಾಗಿ, ಪವಿತ್ರವಾಗಿ ದ್ವಂದ್ವವಾಗದೆ ಏಕವಾಗಿರುವುದು, ನಿರಂತರ ಮೋಕ್ಷವನ್ನು ಬೋಧಿಸುತ್ತ ಬ್ರಹ್ಮತತ್ತ್ವವನ್ನು ನಿರ್ಣಯಿಸಿರುವುದಾದ ಗುರುಪಾದಗಳನ್ನು ಮನಸ್ಸಿನಿಂದ ಮೊದಲ ಕಾಲದಲ್ಲಿಯೇ ಸ್ಮರಿಸುತ್ತೇನೆ.

*4. ಶ್ಲೋ॥ ಬುದ್ಧಿರೂಪಮ ಬುದ್ಧಿಕಂ ತ್ರಿತಯೈಕಕೂಟ ನಿವಾಸಿನಂ*
*ನಿಶ್ಚಲಂ ನಿರತ ಪ್ರಕಾಶಕ ನಿರ್ಮಲಂ ನಿಜಮೂಲಕಮ್!*
*ಪಶ್ಚಿಮಾನ್ತರ ಖೇಲನಂ ನಿಜ ಸುದ್ದಸಂಯಮಿ ಗೋಚರಂ*
*ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ಬುದ್ಧಿಗೆ ಶಕ್ತಿಕೊಡುತ್ತಾ ಬುದ್ಧಿ ಅಲ್ಲದಾಗಿ, ಮೂರು ನಾಡಿಗಳು ಸೇರುವ ಭ್ರೂಮಧ್ಯದಲ್ಲಿ ನಿವಾಸವಿರುವುದು, ಬದಲಾವಣೆಹೊಂದದೆ ನಿರಂತರವು, ನಿರ್ಮಲವು ಸರ್ವಕಾರಣವಾಗಿ ಪ್ರಕಾಶಿಸುವುದು, ಬ್ರಹ್ಮನಾಡಿಯಲ್ಲಿ ಸಹಸ್ರಾರ ಚಕ್ರದಲ್ಲಿ ಆಡುವುದು, ಯಾವ ಗುಣವಿಲ್ಲದ ಶುದ್ಧವಾದವರಿಗೆ ಗೋಚರಿಸುವುದು. ಆದ ಗುರುಪಾದಗಳನ್ನು ನಿರ್ಮಲ ಕಾಲದಲ್ಲಿ ಧ್ಯಾನಿಸುವೆನು.

*5. ಶ್ಲೋ॥ ಹೃದ್ಗತಂ ವಿಮಲಂ ಮನೋಜ್ಞ ವಿಭಾಸಿತಂ ಪರಮಾಣುಕಂ*
*ನೀಲ ಮಧ್ಯ ಸುನೀಲ ಸನ್ನಿಭ ಮಾದಿಬಿಂದು ನಿಜಾಂಶುಕಮ್!*
*ಸೂಕ್ಷ್ಮ ಕರ್ಣಿಕ ಮಧ್ಯಮಸ್ಥಿತ ವಿದ್ಯುದಾದಿ ವಿಭಾಸಿತಂ*
*ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಂ!!*

**ಭಾವಾರ್ಥ :–** ಪ್ರತಿ ಜೀವರಾಶಿಯ ಹೃದಯದಲ್ಲಿ ನಿವಾಸವಾಗಿ, ಮಲಿನ ವಿಲ್ಲದಿರುವುದಾಗಿ, ಪರಮಾಣುವಾಗಿ ಮನಸ್ಸಿಗೆ ಸಾಕ್ಷಿಯಾಗಿ ಇದೆ. ಕಪ್ಪು ಬಣ್ಣದ ಮಧ್ಯದಲ್ಲಿ ಕಪ್ಪನೆಯದಾಗಿ ಇದೆ, ಮೊದಲ ಸ್ವರೂಪವಾಗಿ ನಿಜವಾದ ಅಂಶ ಹೊಂದಿದೆ, ಶರೀರ ಮಧ್ಯದಲ್ಲಿದ್ದು ಸೂಕ್ಷ್ಮವಾದದ್ದನ್ನು ಸಹ ಕೇಳುತ್ತ ಹೆಚ್ಚಿನ ಚುರುಕಾಗಿರುವುದು ಆದ ಗುರುಪಾದಗಳನ್ನು ಪ್ರಾತಃಕಾಲದಲ್ಲಿಯೇ ತಲೆಬಾಗಿ ನಮಸ್ಕರಿಸುತ್ತಿದ್ದೇನೆ.

*6. ಶ್ಲೋ॥ ಪಂಚ ಪಂಚ ಹೃಷೀಕ ದೇಹ ಮನಶ್ಚ ತುಷ್ಕಪರಸ್ಪರಂ*
*ಪಂಚ ಭೂತಸ ಕಾಮಷಟ್ಕ ಸಮೀರ ಶಬ್ದಮುಖೇತರಮ್!*
*ಪಂಚಕೋಶ ಗುಣತ್ರಯಾದಿ ಸಮಸ್ತ ಧರ್ಮವಿಲಕ್ಷಣಂ*
*ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ಐದೈದು ಇಪ್ಪತ್ತೈದು ಇಂದ್ರಿಯಗಳಿಂದ ತಯಾರಾದ ಶರೀರದಲ್ಲಿ ಮನಸ್ಸು ಮೊದಲಾದ ಅಂತಃಕರಣಗಳಿಂದ ಪರಸ್ಪರ ಸಂಬಂಧ ಹೊಂದಿರುವುದು, ಪಂಚ ಭೂತಗಳಿಂದ ತಯಾರಾದ ಕಾಮ ಮೊದಲಾದ ಆರು ಗುಣಗಳು, ಪಂಚ ವಾಯುಗಳು, ಶಬ್ಧ ಮೊದಲಾದ ಪಂಚ ತನ್ಮಾತ್ರಗಳಿಗೆ ಬೇರೆ ಯಾಗಿರುವುದು. ಪಂಚಕೋಶಗಳಿಗೆ, ಮೂರು ಗುಣಗಳ ಧರ್ಮಗಳಿಗೆ ವಿಲಕ್ಷಣ ವಾದುದು ಆದ ಗುರುಪಾದಗಳನ್ನು ಮೊದಲು ಮನಸ್ಸಿನಲ್ಲಿ ಭಕ್ತಿಯಿಂದ ಧ್ಯಾನಿಸುವೆನು.

*7. ಶ್ಲೋ॥ ಪಂಚಮುದ್ರ ಸುಲಕ್ಷ್ಯದರ್ಶನ ಭಾವಮಾತ್ರ ನಿರೂಪಣಂ*
*ವಿದ್ಯುದಾದಿ, ಧಗದ್ಧಗಿತ್ವ ರುಚಿರ್ವಿನೋದ ವಿವರ್ಧನಮ್!*
*ಚಿನ್ಮ ಖಾನ್ತರ ವರ್ತಿನಂ ವಿಲಸದ್ವಿಲಾಸಮ ಮಾಯಕಂ*
*ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ಖೇಚರೀ, ಭೂಚರೀ, ಷಣ್ಮುಕೀ ಮೊದಲಾದ ಪಂಚಮುದ್ರೆಗಳ ಲಕ್ಷ್ಯಾರ್ಥ ದರ್ಶನಭಾವದಿಂದ ನಿರೂಪಣೆಗೆ ಬರುವುದು, ಮಿಂಚಿನಂತೆ ಧಗಧಗ ಹೊಳೆಯುವ ಜ್ಯೋತಿ ಸ್ವರೂಪದಿಂದ ಸಂತೋಷವನ್ನು ಉಂಟುಮಾಡುವುದು, ಬ್ರಹ್ಮನಾಡಿ ಮೊದಲ ಭಾಗವಾದ ಸಹಸ್ರಾರದ ಒಳಗೆ ಅನ್ವಯಿಸುವುದು, ಮಾಯೆಯಿಂದ ಪ್ರಕಾಶಿಸುತ್ತಿದ್ದರು ಮಾಯೆಇಲ್ಲವಾದದು ಆದ ಗುರುಪಾದಗಳನ್ನು ಉದಯಕಾಲದಲ್ಲಿಯೇ ಧ್ಯಾನಿಸುವೆನು.

*8. ಶ್ಲೋ॥ ಪಂಚವರ್ಣ ಶುಚಿರ್ವಿಚಿತ್ರ ವಿಶುದ್ಧ ತತ್ತ್ವ ವಿಚಾರಣಂ*
*ಚಂದ್ರಸೂರ್ಯಚಿದಗ್ನಿ ಮಂಡಲ ಮಂಡಿತಂ ಘನಚಿನ್ಮಯಮ್!*
*ಚಿತ್ಕಳಾ ಪರಿಪೂರ್ಣಮನ್ತರ ಚಿತ್ಸಮಾಧಿ ನಿರೀಕ್ಷಣಂ*
*ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ತತ್ತ್ವ ವಿಚಾರಣೆ ಮಾಡಿದ ಪಂಚ ಭೂತಗಳಲ್ಲಿ ವಿಚಿತ್ರವಾಗಿರು ವುದು, ಸೂರ್ಯ, ಚಂದ್ರ, ಅಗ್ನಿ ಮೊದಲಾದವುಗಳಿಂದ ಸಾರಾಂಶವಾಗಿ

ಎಂದರೆ ಪ್ರಕಾಶವಾಗಿ ಮೂಲ ಪದಾರ್ಥವಾಗಿ ಇರುವುದು, ಚಿತ್ಕಳದಿಂದ ತುಂಬಿರುವುದು, ಶರೀರಾಂತರದಲ್ಲಿ ಜ್ಞಾನ ಸಮಾಧಿಯಿಂದ ತಿಳಿದುಬರುವ ಗುರುಪಾದಗಳಿಗೆ ಮನೋ ನಿರ್ಮಲ ಕಾಲದಲ್ಲಿ, ಭಕ್ತಿಯಿಂದ ನಮಸ್ಕರಿಸುತ್ತಿದ್ದೇನೆ.

*9. ಶ್ಲೋ॥ ಹಂಸಚಾರ ಮಖಂಡನಾದ ಮನೇಕ ವರ್ಣಮ ರೂಪಕಂ*
*ಶಬ್ದಜಾಲಮಯಂ ಚರಾಚರ ಜನ್ತುದೇಹ ನಿವಾಸಿನಮ್!*
*ಚಕ್ರರಾಜ ಮನಾಹತೋದ್ಭವ ಮೇಕವರ್ಣ ಮತಃ ಪರಂ*
*ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ರೂಪವಿಲ್ಲದ, ಶ್ವಾಸರೂಪದಲ್ಲಿ ಅಖಂಡನಾದವಾಗಿ ಅನೇಕ ಜೀವ ಶರೀರಗಳಲ್ಲಿ ಇರುವುದು, "ಸೋಹಂ" ಎನ್ನುವ ಶಬ್ಧದಿಂದ ಚರಾಚರ ಜೀವರಾಶಿಗಳ ದೇಹಗಳಲ್ಲಿ ನಿವಾಸ ಮಾಡುವುದು, ಎಲ್ಲ ಜೀವರಾಶಿಗಳ ಅನಾಹತ ಸ್ಥಾನದಲ್ಲಿ ಒಂದೇ ವಿಧವಾಗಿ ಹುಟ್ಟಿರುವುದಾಗಿ ಅವುಗಳಿಗಿಂತ ಬೇರೆಯಾಗಿರುವುದಾದ ಗುರುಪಾದಗಳನ್ನು ಭಕ್ತಿಯಿಂದ ಮನಸ್ಸಿನಲ್ಲಿ ಭಾವಿಸಿ ಪೂಜಿಸುವೆನು.

*10. ಶ್ಲೋ॥ ಜನ್ಮ ಕರ್ಮ ವಿಲೀನ ಕಾರಣ ಹೇತುಭೂತಮ ಭೂತಕಂ*
*ಜನ್ಮಕರ್ಮ ನಿವಾರಕಂ ರುಚಿಪೂರಕಂ ಭವತಾರಕಂ!*
*ನಾಮರೂಪ ವಿವರ್ಜಿತಂ ನಿಜನಾಯಕಂ ಶುಭದಾಯಕಂ*
*ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ಜನ್ಮ ಕರ್ಮಗಳ ನಾಶನಕ್ಕೆ ಕಾರಣವಾಗಿ ಜನ್ಮ ಇಲ್ಲದ್ದಾಗಿ ಇದೆ. ಜನ್ಮಕರ್ಮ ನಿವಾರಿಸುವುದು, ಸಂಸಾರ ಸಾಗರವನ್ನು ದಾಟಿಸುವ ಪ್ರಕಾಶ ಜ್ಞಾನವಾಗಿರುವುದು, ಹೆಸರು, ರೂಪ ಇಲ್ಲದ್ದು, ಶುಭಕರವಾಗಿ ಎಲ್ಲದಕ್ಕಿಂತ ದೊಡ್ಡ ನಾಯಕತ್ವ ಹೊಂದಿರುವ ಗುರು ಪಾದಗಳಿಗೆ ಮನಸ್ಸಂತರ್ಭಾಗದಿಂದ ಮೊದಲ ಕಾಲದಲ್ಲಿಯೇ ನಮಸ್ಕರಿಸುವೆನು.

*11. ಶ್ಲೋ॥ ತಪ್ತಕಾಂಚನ ದೀಪ್ಯಮಾನ ಮಹಾಣುಮಾತ್ರಮ ರೂಪಕಂ*
*ಚಂದ್ರಿಕಾನ್ತರ ತಾರಕೈರವ ಮುಜ್ಜ್ವಲಂ ಪರಮಾಸ್ಪದಮ್!*
*ನೀಲನೀರದ ಮಧ್ಯಮಸ್ಥಿತಿ ವಿದ್ಯುದಾದಿ ವಿಭಾಸಿತಂ*
*ಪ್ರಾತ ರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ಕಾಂಚಿನ ಬಂಗಾರದ ಪ್ರಕಾಶವಿರುವುದು, ಸೂಕ್ಷ್ಮಾಣು ರೂಪವಾಗಿರುವುದು, ಚಂದ್ರನ ಬೆಳದಿಂಗಳಿಗಿಂತಲೂ, ನಕ್ಷತ್ರಕಾಂತಿಗಿಂತಲೂ, ಬಿಳಿ ತಾವರೆ ಅಂದಕ್ಕಿಂತಲೂ ದೊಡ್ಡದಾಗಿ ಬೇರೆಯಾದ, ಕಪ್ಪನೆಯ ಮೋಡಗಳ ಮಧ್ಯೆ ಹೊಳಪಿನ ಮಿಂಚಾಗಿ ಪ್ರಕಾಶಿಸುವುದಾದ ಗುರುಪಾದಗಳನ್ನು ಮನಸ್ಸಿನಲ್ಲಿ ಭಾವಿಸಿ ಪೂಜಿಸುತ್ತಿದ್ದೇನೆ.

*12. ಶ್ಲೋ॥ ಸ್ಥೂಲಸೂಕ್ಷ್ಮಸಕಾರಣಾನ್ತರ ಖೇಲನಂ ಪರಿಪಾಲನಮ್*
*ವಿಶ್ವತೈಜಸಪ್ರಾಜ್ಞ ಚೇತ ಸಮನ್ತರಾತ್ಮ ನಿಜಾಂಶುಕಮ್!*
*ಸರ್ವಕಾರಣಮೀಶ್ವರಂ ನಿಟಲಾನ್ತರಾಳ ವಿಹಾರಕಮ್*
*ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!*

**ಭಾವಾರ್ಥ :–** ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿ ವ್ಯಾಪಿಸಿ ಇರುವುದು, ವಿಶ್ವ, ತೈಜಸ, ಪ್ರಾಜ್ಞ (ನಿದ್ರೆ, ಎಚ್ಚರ, ಸ್ವಪ್ನ, ಸ್ಥಿತಿಗಳ)ದಲ್ಲಿ ಸಮಸ್ತ ಜೀವಿಗಳ ಅಂತರದಲ್ಲಿ ನಿವಾಶಿಸುವುದು, ಸೂರ್ಯ, ಚಂದ್ರನಾಡಿಗಳ ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿದ್ದು ಸರ್ವಕ್ಕೂ ಕಾರಣವಾದ ಈಶ್ವರ ಶಕ್ತಿಯಾಗಿರುವ ಗುರು ಪಾದಗಳಿಗೆ ಮನಸ್ಸಿನಲ್ಲಿ ನೆನೆದು ನಮಸ್ಕರಿಸುತ್ತಿದ್ದೇನೆ.



# ಗುರು ಸ್ತೋತ್ರಗಳು

*1. ಶ್ಲೋ॥* *ಕಳತ್ರಂ ಧನಂ ಪುತ್ರಪೌತ್ರಾದಿ ಸರ್ವಂ*
*ಗೃಹಂ ಬಾಂಧವಾ ಸರ್ವಮೇ ತದ್ಧಿಜಾತಂ*
*ಗುರೋರಂಘ್ರಿ ಪದ್ಮೇ ಮನಶ್ಚೇನ್ನಲಗ್ನಂ*
*ತತಃಕಿಂ ತತಃಕಿಂ ತತಃಕಿಂ ತತಃಕಿಂ!!*

**ಭಾವಾರ್ಥ :–** ಹೆಂಡತಿ, ಧನ, ಪುತ್ರರು, ಮೊಮ್ಮಕ್ಕಳು, ಬಂಧುಗಳು, ಗೃಹ ಮೊದಲಾದವುಗಳೆಲ್ಲವು ಮಾನವನಿಗಿದ್ದರೂ, ಗುರುಪಾದ ಪದ್ಮಗಳ ಮೇಲೆ ಮನಸ್ಸು ಲಗ್ನವಾಗದೆ ಇರುವಾಗ ಇರುವವೆಲ್ಲವೂ ಏತಕ್ಕಾಗಿ? ಏನು ಪ್ರಯೋಜನೆ? ಏನು ಪ್ರಯೋಜನೆ? ಏನು ಪ್ರಯೋಜನೆ?

*2. ಶ್ಲೋ॥* *ಷಡಂಗಾದಿ ವೇದೊ ಮುಖೇಶಾಸ್ತ್ರ ವಿದ್ಯಾ*
*ಕವಿತ್ವಾದಿ ಗದ್ಯಂ ಸುಪದ್ಯಂ ಕರೋತಿ*
*ಗುರೋರಂಘ್ರಿ ಪದ್ಮೇ ಮನಶ್ಚೇನ್ನ ಲಗ್ನಂ*
*ತತಃಕಿಂ ತತಃಕಿಂ ತತಃಕಿಂ ತತಃಕಿಂ!!*

**ಭಾವಾರ್ಥ :–** ಷಡಂಗಾದಿ ವೇದಗಳು, ಶಾಸ್ತ್ರವಿದ್ಯೆಗಳು ಕಂಠದಲ್ಲಿಯೇ ಇದ್ದರೂ, ಕವಿತ್ವಾದಿ ಗದ್ಯ ಪದ್ಯಗಳು ಸುಲಭವಾಗಿ ಸೇರಿಸುವ ಸಾಮರ್ಥ್ಯವಿದ್ದರೂ, ಗುರುಪಾದ ಪದ್ಮಗಳ ಮೇಲೆ ಮನಸ್ಸು ಲಗ್ನವಿಲ್ಲದವನಿಗೆ ಅವೆಲ್ಲವೂ ಇದ್ದರೂ ಏನು ಪ್ರಯೋಜನೆ? ಏನು ಸಾರ್ಥಕ? ಅವೆಲ್ಲವು ಏಕೆ?

*3. ಶ್ಲೋ॥* *ವಿದೇಶೇಷು ಮಾನ್ಯಃ ಸ್ವದೇಶೇಷು ಧನ್ಯಃ*
*ಸದಾಚಾರ ನಿತ್ಯ ಸುವೃತ್ತಿನ್ನಚಾನ್ಯಃ*
*ಗುರೋರಂಘ್ರಿ ಪದ್ಮೇ ಮನಶ್ಚೇನ್ನ ಲಗ್ನಂ*
*ತತಃಕಿಂ ತತಃಕಿಂ ತತಃಕಿಂ ತತಃಕಿಂ!!*

**ಭಾವಾರ್ಥ :–** ಮಾನವನು ವಿದೇಶಗಳಲ್ಲಿ ಮಹಾ ಪೂಜ್ಯನಾಗಿದ್ದರೂ, ಸ್ವಂತದೇಶದಲ್ಲಿ ಧನ್ಯನಾಗಿ ಇದ್ದರೂ, ಎಲ್ಲಕಾಲದಲ್ಲು ಸದಾಚಾರಗಳು, ಸತ್

ಪ್ರವರ್ತನೆ ಹೊಂದಿದ್ದರೂ, ಗುರುಪಾದ ಪದ್ಮಗ್ಗಳಮೇಲೆ ಮನಸ್ಸು ಲಗ್ನ ಇಲ್ಲದವನು ಹೇಗಿದ್ದರೂ ಏನು ಪ್ರಯೋಜನೆ? ಏನು ಸಾರ್ಥಕ? ಏನು ಪ್ರಯೋಜನೆ? ಏನು ಸಾರ್ಥಕ?

*4. ಶ್ಲೋ॥* **ಕ್ಷಮಾಮಂಡಲೆ ಭೂಪ ಭೂಪಾಲ ಬೃಂದಂ**
**ಸದಾ ಸೇವ್ಯತೆ ಯಸ್ಯಪಾದಾರ ವಿಂದಂ**
**ಗುರೋರಂಘ್ರಿ ಪದ್ಮೇ ಮನಶ್ಚೇನ್ನ ಲಗ್ನಂ**
**ತತಃಕಿಂ ತತಃಕಿಂ ತತಃಕಿಂ ತತಃಕಿಂ!!**

**ಭಾವಾರ್ಥ :–** ನೀನು ಭೂಮಿ ಮೇಲೆ ಚಕ್ರವರ್ತಿಯಾಗಿದ್ದರು, ಚಿಕ್ಕ ರಾಜರು ಗಳೆಲ್ಲರು ಯಾವಾಗಲು ನಿನ್ನ ಪಾದಗಳ ಸೇವೆ ಮಾಡುತ್ತಿದ್ದರು ಗುರುಪಾದ ಪದ್ಮಗಳ ಮೇಲೆ ಮನಸ್ಸು ಲಗ್ನವಿಲ್ಲದಿರುವಾಗ ನೀನು ಎಷ್ಟರ ಮಟ್ಟಿಗಿದ್ದರೂ ಏನು ಪ್ರಯೋಜನೆ? ಏನು ಸಾರ್ಥಕ? ಏನು ಪ್ರಯೋಜನೆ? ಏನು ಸಾರ್ಥಕ?

*5. ಶ್ಲೋ॥* **ನಭೋಗೇ ನಯೋಗೇ ನವಾರಾಜ್ಯಭೋಗೇ**
**ಸಕಾಂತಾ ಮುಖೇನ್ನೈವ ವಿತ್ತೇಷು ಯುಕ್ತಃ**
**ಗುರೋರಂಘ್ರಿ ಪದ್ಮೇ ಮನಶ್ಚೇನ್ನಲಗ್ನಂ**
**ತತಃಕಿಂ ತತಃಕಿಂ ತತಃಕಿಂ ತತಃಕಿಂ!!**

**ಭಾವಾರ್ಥ :–** ಎಷ್ಟೋ ಭೋಗ ಸುಖಗಳಿದ್ದರೂ, ದೊಡ್ಡ ಯೋಗಿಯಾದರೂ, ದೊಡ್ಡ ರಾಜ್ಯವನ್ನು ಭೋಗಿಸಿದರೂ, ಒಳ್ಳೆಯ ಅಂದವಾದ ಸ್ತ್ರೀಯರ ಸಾಂಗತ್ಯವಿದ್ದರೂ, ಗುರುಪಾದ ಪದ್ಮಗಳ ಮೇಲೆ ಮನಸ್ಸು ಲಗ್ನವಿಲ್ಲದವನಿಗೆ ಏನಿದ್ದರೂ ಏನು ಪ್ರಯೋಜನೆ? ಏನು ಸಾರ್ಥಕ? ಏನು ಪ್ರಯೋಜನೆ? ಏನು ಸಾರ್ಥಕ?

***6. ಶ್ಲೋ॥*** ***ಯಶೋಮೇಗತಂ ದಿಕ್ಷುದಾನ ಪ್ರತಾಪ***
***ಜಗದ್ವಸ್ತಂ ಸರ್ವಂ ಕರೇ ಯತ್ ಪ್ರಸಾದಾತ್***
***ಗುರೋರಂಘ್ರಿ ಪದ್ಮೇ ಮನಶ್ಚೇನ್ನಲಗ್ನಂ***
***ತತಃಕಿಂ ತತಃಕಿಂ ತತಃಕಿಂ ತತಃಕಿಂ!!***

**ಭಾವಾರ್ಥ :–** ತನ್ನ ಕೀರ್ತಿ, ಪ್ರತಾಪ, ದಾನಗುಣ ಎಲ್ಲದಿಕ್ಕುಗಳಲ್ಲಿ ವ್ಯಾಪಿಸಿದರೂ, ಜಗತ್ತೆಲ್ಲವೂ ತನ್ನ ಸ್ವಾಧೀನದಲ್ಲಿದ್ದರೂ, ಗುರುಪಾದ ಪದ್ಮಗಳ ಮೇಲೆ ಮನಸ್ಸು ಲಗ್ನವಿಲ್ಲದವನಿಗೆ ಏನಿದ್ದರೂ, ಹೇಗಿದ್ದರೂ, ಏನು ಪ್ರಯೋಜನೆ? ಏನು ಸಾರ್ಥಕ? ಏನು ಪ್ರಯೋಜನೆ? ಏನು ಸಾರ್ಥಕ?

***7. ಶ್ಲೋ॥*** ***ಅರಣ್ಯೇ ನಿವಾಸೇ ಸ್ವಗೇಹೇಚ ಕಾರ್ಯಃ***
***ನದೇಹೇ ಮನೋ ವರ್ತತೇಮೇ ಅನಾರ್ವೇ***
***ಗುರೋರಂಘ್ರಿ ಪದ್ಮೇ ಮನ ಶ್ಚೇನ್ನಲಗ್ನಂ***
***ತತಃಕಿಂ ತತಃಕಿಂ ತತಃಕಿಂ ತತಃಕಿಂ!!***

**ಭಾವಾರ್ಥ :–** ಮಾನವನು ಅರಣ್ಯದಲ್ಲಿದ್ದರೂ, ಸ್ವಂತ ಮನೆಯಲ್ಲಿದ್ದರೂ, ಸ್ಥಿರವಲ್ಲದ ಶರೀರ ಕಾರ್ಯಗಳಲ್ಲಿ ಮನಸ್ಸನ್ನಿರಿಸದೆ ವಿರಕ್ತನಾದಾಗ, ಗುರುಪಾದ ಪದ್ಮಗಳ ಮೇಲೆ ಮನಸ್ಸು ಲಗ್ನವಿಲ್ಲದಿರುವಾಗ ಏನು ಪ್ರಯೋಜನ? ಏನು ಸಾರ್ಥಕ? ಏನು ಪ್ರಯೋಜನ? ಏನು ಸಾರ್ಥಕ?

***8. ಶ್ಲೋ॥*** ***ಅನರ್ಘ್ಯಾಣಿ ರತ್ನಾನಿ ಯುಕ್ತಾನಿ ಸಮ್ಯಕ್***
***ಸಮಾಲಿಂಗಿತಾ ಕಾಮಿನೀ ಯಾಮಿನೀಸು***
***ಗುರೋರಂಘ್ರಿ ಪದ್ಮೇ ಮನ ಶ್ಚೇನ್ನಲಗ್ನಂ***
***ತತಃಕಿಂ ತತಃಕಿಂ ತತಃಕಿಂ ತತಃಕಿಂ!!***

**ಭಾವಾರ್ಥ :–** ಎಷ್ಟೋ ಬೆಲೆಯುಳ್ಳ ದೊಡ್ಡ ರತ್ನಗಳು ಇರುವವನಾದರೂ, ಸುಂದರವಾದ ಸ್ತ್ರೀಯರನ್ನು ಆಲಿಂಗನ ಮಾಡಿಕೊಂಡವನಾದರೂ, ಗುರುಪಾದ

ಪದ್ಮಗಳ ಮೇಲೆ ಮನಸ್ಸು ಇರಿಸದವನು ಹೇಗಿದ್ದರೂ, ಏನಿದ್ದರು ಏನು ಪ್ರಯೋಜನೆ? ಏನು ಸಾರ್ಥಕ? ಏನು ಪ್ರಯೋಜನೆ? ಏನು ಸಾರ್ಥಕ?

***9. ಶ್ಲೋ॥*** ***ಶರೀರಂ, ಸುರೂಪಂ, ತಥಾವಾಕಳತ್ರಂ***
***ಯಶಶ್ಚಾರು ಚಿತ್ರಂ ಧನಂ ಮೇರುತುಲ್ಯಂ***
***ಗುರೋರಂಘ್ರಿ ಪದ್ಮೇ ಮನ ಶ್ಚೇನ್ನಲಗ್ನಂ***
***ತತಃಕಿಂ ತತಃಕಿಂ ತತಃಕಿಂ ತತಃಕಿಂ!!***

**ಭಾವಾರ್ಥ :–** ಮಾನವನಿಗೆ ಸುಂದರವಾದ ಶರೀರ ಮತ್ತು ಒಳ್ಳೆಯ ಗುಣವಂತಳಾದ ಹೆಂಡತಿ, ವಿಚಿತ್ರವಾದ ದೊಡ್ಡ ಯಶಸ್ಸು, ಮೇರು ಪರ್ವತವನ್ನು ಹೋಲಿರುವ ಧನ ಇದ್ದರೂ, ಗುರುಪಾದ ಪದ್ಮಗಳ ಮೇಲೆ ಮನಸ್ಸು ಲಗ್ನ ವಿಲ್ಲದವನಿಗೆ ಎಷ್ಟಿದ್ದರೂ ಏನು ಪ್ರಯೋಜನೆ? ಏನು ಸಾರ್ಥಕ? ಏನು ಫಲ? ಏನು ಉಪಯೋಗ?



# ಗುರುವಿನ ಜ್ಞಾನವನ್ನು ಪ್ರಜೆಗಳು ಗುರುತಿಸುತ್ತಾರಾ?

ಗುರುವಾಗಿ ಬಂದಿರುವವನು ತನ್ನನ್ನು ಯಾರೂ ಗುರುತಿಸದ ಹಾಗೆ, ಮಾಯೆಯಲ್ಲಿ ಮಾಯೆಯಾಗಿ ನಟಿಸಿದರೂ, ಮಾಯೆಯನ್ನು ಗುರುತಿಸಿದ ಭೀಷ್ಮನಂತಹವರು, ಮಾಯೆಯಲ್ಲಿ ಮಾಯೆಯಾಗಿರುವ ಮಾಯಾಧಿಪತಿಯಾದ ಗುರುವನ್ನು ಸುಲಭವಾಗಿ ಗುರುತಿಸಬಲ್ಲರು. ಆದರೆ ಭೀಷ್ಮನಂತವರು ಭೂಮಿ ಮೇಲೆ ಅಪರೂಪ, ಆದುದರಿಂದ ಗುರುವನ್ನು ಗುರುತಿಸುವುದು ಅಪರೂಪವಾದ ಕೆಲಸವೆಂದೇ ಹೇಳಬಹುದು. ಆತನನ್ನು ಗುರುತಿಸದಿರುವಾಗ ಆತನ ವಿದ್ಯೆಯನ್ನು ಯಾರಾದರು ಗುರುತಿಸಬಲ್ಲರಾ ಎಂದು ಕೆಲವರಿಗೆ ಪ್ರಶ್ನೆಬರಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಮ್ಮ ದೇಶದಲ್ಲಿ ಐದುಸಾವಿರ ನೂರು ವರ್ಷಗಳ ಕೆಳಗೆ ದೇವರು ಭಗವಂತನಾಗಿ ಎಂದರೆ ಗುರುವಾಗಿ ಭೂಮಿ ಮೇಲೆ ಬಂದಿದ್ದಾ ನೆಂದು ಈ ದಿನ ನಾವು ಹೇಳಿಕೊಳ್ಳುತ್ತಿದ್ದೇವೆ. ಆ ದಿನ ಭಗವಂತನಾದ

ಕೃಷ್ಣನು ಭಗವದ್ಗೀತೆಯನ್ನು ಹೇಳಿದರೂ, ಅದನ್ನು ಕೇಳದಿದ್ದರೂ ಎಂಟು ದಿನಗಳಿಗೇ ಯುದ್ಧರಂಗದಲ್ಲಿ ಭೀಷ್ಮನು ಕೆಳಗೆ ಬಿದ್ದು ಹೋಗಿದ್ದಾನೆ. ಅರ್ಜುನನಿಗೆ ಗೀತೆಯನ್ನು ಹೇಳಿದ ವಿಷಯವು ಸಹ ಭೀಷ್ಮನಿಗೆ ತಿಳಿದಿಲ್ಲ. ಕೃಷ್ಣನು ಯಾರೆನ್ನುವುದು ಆ ದಿನ ಭೀಷ್ಮನಿಗೆ ಹೊರತು ಯಾರಿಗೂ ತಿಳಿದಿಲ್ಲ. ಕೃಷ್ಣನ ಘನತೆ ಯಾರಿಗೂ ತಿಳಿಯದು ಆದ್ದರಿಂದ ಆತನು ಹೇಳಿದ ವಿದ್ಯೆಯನ್ನು ಅಥವಾ ಆತನು ಹೇಳಿದ ಜ್ಞಾನವನ್ನು ಯಾರೂ ಅರ್ಥಮಾಡಿಕೊಳ್ಳಲಿಲ್ಲ. ಆ ದಿನ ಭಗವದ್ಗೀತೆಯನ್ನು ಅರ್ಜುನನಿಂದ ತಿಳಿದುಕೊಂಡು ಅದನ್ನು ಶ್ಲೋಕಗಳಾಗಿ ಬರೆದು ಗ್ರಂಥರೂಪ ಮಾಡಿದ ವ್ಯಾಸನು ಸಹ ಗೀತೆಯಲ್ಲಿನ ಸಾರಾಂಶವನ್ನು ಗ್ರಹಿಸದೆ ಹೋಗಿದ್ದಾನೆ. ಆ ದಿನ ಗೀತೆಯನ್ನು ಬರೆದ ವ್ಯಾಸನೇ ತಿಳಿದುಕೊಳ್ಳದಿರುವಾಗ, ಆತನಿಗಿಂತ ವಿದ್ಯೆಯಲ್ಲಿ ಎಷ್ಟೋ ಕಡಿಮೆಯಾದ ಉಳಿದ ಪ್ರಜೆಗಳು ತಿಳಿದುಕೊಂಡಿದ್ದಾರೆಂದು ಹೇಗೆ ಹೇಳಬಲ್ಲೆವು? ಆದ್ದರಿಂದ ಗುರು ಶರೀರದಿಂದಿರುವಾಗ ಆತನು ಹೇಳಿದ ಬೋಧನೆಯನ್ನು ಗ್ರಹಿಸಲಾರೆವು. ಆತನು ಹೋದ ನಂತರ ತಿಳಿದುಕೊಳ್ಳಬಹುದು. ಪ್ರತ್ಯಕ್ಷವಾಗಿ ಇರುವವನಿಗಿಂತ ಸತ್ತು ಹೋದವನಿಗೆ ಸ್ವಲ್ಪ ಹೆಚ್ಚಿನ ಬೆಲೆ ಕೊಡುತ್ತೇವೆ. ಆದ್ದರಿಂದ ಗುರು ಶರೀರದಿಂದ ಪ್ರತ್ಯಕ್ಷವಾಗಿ ಇಲ್ಲದೆ ಹೋದ ಸ್ವಲ್ಪ ಕಾಲಕ್ಕೆ ಯಾರಾದರು ತಿಳಿದುಕೊಳ್ಳುವುದಕ್ಕೆ ಅವಕಾಶವಿದೆ. ಕೃಷ್ಣನು ಎಂದು ಹೆಸರುಹೊಂದಿದ ಗುರು ದ್ವಾಪರಯುಗದಲ್ಲಿ ಭಗವದ್ಗೀತೆ ಎನ್ನುವ ಹೆಸರಿನಿಂದ ಜ್ಞಾನವನ್ನು ಹೇಳಿದರೆ, ಆತನು ಹೇಳಿದ ಗೀತಾಜ್ಞಾನದಲ್ಲಿ ಧರ್ಮಗಳು ಸಂಪೂರ್ಣವಾಗಿ ಇರುವಾಗ, ಆ ದಿನದಿಂದ ಇಂದಿನವರೆಗೆ ಐದು ಸಾವಿರ ವರ್ಷಗಳು ಕಳೆದುಹೋದರೂ, ಆತನ ಜ್ಞಾನವನ್ನು ಸಂಪೂರ್ಣವಾಗಿ ಮನುಷ್ಯರು ತಿಳಿದುಕೊಳ್ಳದೆ ಹೋಗಿದ್ದಾರೆ. ಇನ್ನೊಂದುಬಾರಿ ಆತನು ಬಂದರಾಗಲಿ ನಮಗೆ ಗೀತೆ ಅರ್ಥವಾಗುವುದಿಲ್ಲವೇನೋ!



# 38 ಗುರುವನ್ನು ಮನುಷ್ಯರು ಗೌರವಿಸುತ್ತಾರಾ?

ಒಬ್ಬ ಮನುಷ್ಯನಲ್ಲಿನ ಬೆಲೆ ಇನ್ನೊಬ್ಬನಿಗೆ ತಿಳಿದಾಗ ಅವನು ಆ ಮನುಷ್ಯನನ್ನು ಗೌರವಿಸುತ್ತಾನೆ. ಗುರುವಿನಲ್ಲಿನ ಬೆಲೆ ಪ್ರಜೆಗಳಿಗೆ ತಿಳಿದಿಲ್ಲ ಅಲ್ಲವೆ! ಅಂತಹದರಲ್ಲಿ ಹೇಗೆ ಗೌರವಿಸುತ್ತಾರೆ? ಗುರು ಶರೀರದಿಂದ ಇದ್ದು ಗುಣಗಳಿಂದ ಸಂಚರಿಸುವಾಗ ಗುಣಗಳ ಕಾರ್ಯಗಳೆ ಕಾಣಿಸುವವು. ಉಳಿದ ಪ್ರಜೆಗಳೆಲ್ಲರು ಸಹ ಗುಣಗಳಿಂದಲೇ ಕಾರ್ಯಗಳು ಮಾಡುತ್ತಿದ್ದಾರೆ. ಆದರೆ ಗುರುವನ್ನು ಗುರುವಾಗಿ ಅಲ್ಲದೆ ಸಾಮಾನ್ಯ ಮನುಷ್ಯನ ಹಾಗೆ ಪ್ರಜೆಗಳು ಗುರುತಿಸುತ್ತಾರೆ. ಗುರುವಿನ ಘನತೆಯನ್ನು ತಿಳಿಯದಿರುವಾಗ ಕೆಲವು ಸಂದರ್ಭಗಳಲ್ಲಿ ಆತನನ್ನು ಅವಮಾನ ಪಾಲು ಸಹ ಮಾಡುವರು. ಇದೇ ವಿಷಯವನ್ನು ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗವೆಂಬ ಅಧ್ಯಾಯದಲ್ಲಿ ಹನ್ನೊಂದನೆ ಶ್ಲೋಕದಲ್ಲಿ ಭಗವಂತನೆ ಹೇಳಿದ್ದಾನೆ.

**ಶ್ಲೋ॥** *ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ।*
*ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್ ॥*

**ಭಾವಾರ್ಥ :–** ಸರ್ವಜೀವರಾಶಿಗಳಿಗೂ ಮಹೇಶ್ವರನಾದ ನನ್ನನ್ನು, ದೊಡ್ಡದಾದ ನನ್ನ ಮಹತ್ವವನ್ನು ತಿಳಿಯಲಾರದೆ, ಮಾನವ ಶರೀರವನ್ನು ಧರಿಸಿದ ನನ್ನನ್ನು ನೋಡಿ ಮೂಢರು ಅವಮಾನ ಮಾಡುತ್ತಿದ್ದಾರೆ.

**ವಿವರ :–** ಭೂಮಿ ಮೇಲಿರುವ ಸಮಸ್ತ ಜೀವರಾಶಿಗಳನ್ನು ಸೃಷ್ಟಿಸಿದವನು ಸೃಷ್ಟಿಕರ್ತನಾದ ದೇವರು. **ಆ ದೇವರು ವಿಶ್ವವೆಲ್ಲಾ ವ್ಯಾಪಿಸಿದ್ದು ತನ್ನ ಶಕ್ತಿಯಲ್ಲಿನ ಸ್ವಲ್ಪ ಅಂಶ, ಶರೀರವನ್ನು ಧರಿಸಿ ಹುಟ್ಟುವ ಹಾಗೆ ಮಾಡುವನು. ದೇವರಿಂದ ಹಾಗೆ ಹುಟ್ಟಿದ ಆಕಾರವನ್ನು ಭಗವಂತನು ಅಥವಾ ಗುರು ಎಂದು ನಾವು ಅನ್ನುತ್ತಿದ್ದೇವೆ.** ಗುರು ಅಥವಾ ಭಗವಂತನು ಸಾಕಾರವಾಗಿ ಕಾಣಿಸುತ್ತಾನೆ. ದೇವರು ನಿರಾಕಾರವಾಗಿ ಕಾಣಿಸದ ಹಾಗೆ ಇದ್ದಾನೆ. ಕಾಣಿಸುವುದು, ಕಾಣಿಸದೆ ಹೋಗುವುದು ಎನ್ನುವ ವ್ಯತ್ಯಾಸ ಹೊರತು ದೇವರಿಗೆ, ಗುರುವಿಗೆ ಯಾವ ಬೇಧವಿಲ್ಲ. ವಿಶಾಲವಾಗಿರುವ ಸಮುದ್ರದೊಳಗಿನಿಂದ ಎಗರಿಬಂದ ನೀರಿನ

ಬಿಂದುವಿನಲ್ಲಿಯು, ಸಮುದ್ರದಲ್ಲಿಯು ನೀರೇ ಇದ್ದಹಾಗೆ, ದೇವರಲ್ಲಿಯೂ, ಗುರುವಿನಲ್ಲಿಯೂ ಒಂದೇ ಶಕ್ತಿ ಇದೆ. ಬಿಂದುವಾಗಿರುವ ನೀರಿಗೆ ಸಮುದ್ರ ವಾಗಿರುವ ನೀರಿಗೆ ಒಂದೇ ಧರ್ಮವಿದೆ. ಗುರು ಶರೀರವನ್ನು ಧರಿಸಿ ಕಾಣಿಸುವುದ ರಿಂದ, ಗುರುವು ಸಹ ಕರ್ಮಾನುಸಾರ ಅಜ್ಞಾನಿಯಂತೆ ಪ್ರವರ್ತಿಸುವುದರಿಂದ, ಜ್ಞಾನವಿಲ್ಲದ ಮಾನವರು ಗುರುವನ್ನು ಸಹ ಸಾಧಾರಣ ಮನುಷ್ಯನಂತೆ ಲೆಕ್ಕಿಸಿ ಆತನನ್ನು ಅವಮಾನಗೊಳಿಸುವರು. ಗುರುವಿನಲ್ಲಿನ ದೊಡ್ಡತನವನ್ನು ಯಾವ ಕಾರಣಕ್ಕೂ ಗ್ರಹಿಸದ ಮನುಷ್ಯರು ಆತನು ಹೇಳುವ ಜ್ಞಾನವನ್ನು ವಿಭೇದಿಸಿ, ಆತನಿಗಿಂತ ಅವರಿಗೇ ಹೆಚ್ಚಿನ ಜ್ಞಾನ ತಿಳಿದಿದೆಯೆಂದುಕೊಂಡು, "ನೀನು ಅಜ್ಞಾನವನ್ನು ಬೋಧಿಸುತ್ತೀಯೆಂದು" ಆತನೊಂದಿಗೆ ವಾದಕ್ಕಿಳಿದು ಹೇಳನವಾಗಿ ಮಾತನಾಡುತ್ತಾರೆ. ಆತನ ಜ್ಞಾನವನ್ನಾಗಲಿ, ಆತನ ವ್ಯಕ್ತಿತ್ವವನ್ನಾಗಲಿ ಲೆಕ್ಕಿಸದೆ ಆತನ ಮೇಲೆ ದಾಳಿಮಾಡುವುದಕ್ಕೂ ಸಹ ಪ್ರಯತ್ನಿಸುವರು. ಇದೆಲ್ಲವು ಆತನನ್ನು (ಗುರುವನ್ನು) ಅವಮಾನ ಮಾಡಿದಹಾಗೆ ಅಲ್ಲವೆ! ಸಂಪೂರ್ಣ ಜ್ಞಾನ ಕೇಂದ್ರ ವಾದ ಗುರುವಿಗೆ ಯಾವ ಬೆಲೆಕೊಡದೆ ಆತನು ಹೇಳಿರುವುದು ಅಜ್ಞಾನವೆಂದು, ತಮಗೆ ತಿಳಿದಿರುವುದೇ ಜ್ಞಾನವೆಂದುಕೊಳ್ಳುವುದು ಆತನನ್ನು (ಗುರುವನ್ನು) ಅವಮಾನ ಮಾಡಿದಂತಲ್ಲವೆ! **ನಾವು ಚೆನ್ನಾಗಿರುವುದಕ್ಕಾಗಿ, ನಮಗೆ ಮೋಕ್ಷ ಬರುವುದಕ್ಕಾಗಿ, ನಮಗೆ ಧರ್ಮಗಳನ್ನು ತಿಳಿಸುವುದಕ್ಕಾಗಿ, ಅದೇ ಉದ್ದೇಶಕ್ಕಾಗಿ ಭೂಮಿ ಮೇಲೆ ಬಂದಿರುವ ಭಗವಂತನನ್ನು (ಗುರುವನ್ನು) ಆತನು ಹೇಳುವುದೇನೊ ಕೇಳದೆ, ಇತರರಿಂದ ರೊಚ್ಚಿಗೆದ್ದವರು ಮೂರ್ಖವಾಗಿ ನಾವು ಏನು ಮಾಡುತ್ತಿದ್ದೇವೆಂದು ಆಲೋಚಿಸದೆ ಗುರುವನ್ನು ದೂಷಿಸಿ ಅವಮಾನ ಮಾಡುವವರು ಸಹ ಇದ್ದಾರೆ.** ಆದ್ದರಿಂದ ಭಗವದ್ಗೀತೆಯಲ್ಲಿ ಭಗವಂತನು ಮೂಢರು ನನ್ನನ್ನು ಅವಮಾನಿಸುತ್ತಿದ್ದಾರೆಂದು ಹೇಳಿದ್ದಾನೆ. ಮೂಢರಾದ ಅಜ್ಞಾನಿಗಳು ದೇವರಾದ ಭಗವಂತನು (ಗುರು) ಯಾವಾಗ ಭೂಮಿ ಮೇಲೆ ಬಂದರೂ ಆತನನ್ನು ಅವಮಾನಿಸುವುದನ್ನು ಬಿಡುವುದಿಲ್ಲ. ದೈವಭಕ್ತಿ (ಗುರುಭಕ್ತಿ) ಏನೊ ತಿಳಿಯದ ದೇವತೆಗಳ ಭಕ್ತಿ ಇರುವವರೂ, ದೇಶಭಕ್ತಿ ಇರುವವರೂ, ಮತ ಭಕ್ತಿ ಇರುವವರೂ ತಮಗೆ ತಿಳಿದಿರುವುದೆ ನಿಜವಾದ ಜ್ಞಾನವೆಂದು,

ಗುರು ಹೇಳುವ ಜ್ಞಾನವನ್ನು ಹೀಯಾಳಿಸುವುದೇ ಅಲ್ಲದೆ ಗುರುವನ್ನು ದೂಷಿಸುವರು. ಆದ್ದರಿಂದ ನೀವು ದೇಶಭಕ್ತರಾದರೆ ಅದನ್ನು ಮೀರಿದ ದೈವಭಕ್ತಿಯನ್ನು ಬೆಳೆಸಿಕೊಳ್ಳಬೇಕು. ನೀವು ಮತ ಭಕ್ತರಾದರೆ ಅದನ್ನು ಮೀರಿದ ಗುರುಭಕ್ತಿಯನ್ನು ಬೆಳೆಸಿಕೊಳ್ಳಬೇಕು. ಆಗಲೆ ಗುರುವನ್ನು ಗೌರವಿಸಿದವರಾಗುತ್ತೇವೆ.



# ಗುರುವನ್ನು ದೂಷಿಸಿದವರನ್ನು ಗುರುವೇನು ಮಾಡುವನು?

ಭೌತಿಕ ಶರೀರವನ್ನು ಧರಿಸಿದ ಗುರುವನ್ನು ಮೂಢರಾದವರು ದೂಷಿಸಿದರೆ ಗುರು ಅವರನ್ನು ಏನು ಮಾಡಬಾರದೆಂದುಕೊಳ್ಳುವನು. ಏಕೆಂದರೆ ಗುರುವನ್ನು ಅವಮಾನಪಡಿಸಿದರೆ, ಭಯಂಕರವಾದ ಕರ್ಮ (ಪಾಪ) ಅವರಿಗೆ ಸೇರುತ್ತದೆ. ಆ ಪಾಪವನ್ನು ಅನುಭವಿಸುವುದೆ ದೊಡ್ಡ ಶಿಕ್ಷೆ ಆಗಿರುವಾಗ ಬೇರೆ ಆತನೇನೋ ಮಾಡಬೇಕಾಗಿರುವ ಕೆಲಸವಿಲ್ಲ. ಗುರುವನ್ನು ದೂಷಿಸಿದ ಮೂಢರು ಭಯಂಕರ ಪಾಪವನ್ನು ಹೊಂದಿದವರಾಗಿ, ದೇಶಭಕ್ತಿ, ಮತಭಕ್ತಿ ಎನ್ನುತ್ತಾ ವ್ಯರ್ಥವಾದ ಜ್ಞಾನವನ್ನು ಹೊಂದಿದವರಾಗಿ, ಅಸುರ ಗುಣಗಳಲ್ಲಿ ಸಿಲುಕಿಕೊಂಡು ಹೋಗುತ್ತಿದ್ದಾರೆಂದು ರಾಜವಿದ್ಯಾ ರಾಜಗುಹ್ಯಾ ಯೋಗವೆಂಬ 12ನೇ ಶ್ಲೋಕದಲ್ಲಿ ಹೇಳಿರುವುದೇ ಅಲ್ಲದೆ ಅದೇ ಭಗವದ್ಗೀತೆಯಲ್ಲಿ ದೈವಾಸುರ ಸಂಪದ್ವಿಭಾಗ ಯೋಗದಲ್ಲಿ 20ನೇ ಶ್ಲೋಕದಲ್ಲಿ...

**ಶ್ಲೋ॥** ***ಅಸುರೀಂ ಯೊನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ।***
***ಮಾಮ ಪ್ರಾಪ್ಯೈವ ಕೌಂತೇಯ ತತೋಯಾನ್ತ್ಯಧಮಾಂ ಗತಿಮ್॥***

**ಭಾವಾರ್ಥ :–** ಅಸುರ ಯೋನಿಗಳಲ್ಲಿ ಜನ್ಮಿಸುತ್ತಾ, ಮೂಢರಾಗುತ್ತಾ ನನ್ನನ್ನು ತಿಳಿದುಕೊಳ್ಳುವ ಜ್ಞಾನವನ್ನು ಯಾವ ಕಾರಣಕ್ಕೂ ತಿಳಿಯದೆ ಜನ್ಮ, ಜನ್ಮಕ್ಕು ಅಧೋಗತಿ ಪಾಲಾಗುತ್ತಿದ್ದಾರೆ.

**ವಿವರ :–** ಗುರುವನ್ನು ಅವಮಾನಿಸುವವರು ರಾಕ್ಷಸಗುಣ ಇರುವವರಾಗಿ, ಪಾಪಗಳನ್ನು ಮೂಟೆಕಟ್ಟಿಕೊಂಡವರಾಗಿ, ದೇವರ ಜ್ಞಾನದ ದಡ (ಗಟ್ಟು) ಸಿಗದೆ ಸಾಯುತ್ತಾ, ಹುಟ್ಟುತ್ತಾ, ಜನ್ಮ ಜನ್ಮಕ್ಕೂ ಅಧೋಗತಿ ಪಾಲಾಗುತ್ತಾ, ಅಂತ್ಯವಾಗದ ಪಾಪವನ್ನು ಹೊಂದಿದವರಾಗಿರುತ್ತಾರೆ.

ಈ ವಿಧದಲ್ಲಿ ಗೀತೆಯಲ್ಲಿ ತಾನೇನು ಮಾಡದೇನೆ ಪಾಪಗಳಲ್ಲಿ ಸಿಲುಕಿಕೊಳ್ಳುತ್ತೀರೆಂದು ಭಗವಂತನು ಹೇಳಿದ್ದಾನೆ. ಭಗವಂತನು ಪ್ರತಿಕಾರವಾಗಿ ಏನು ಮಾಡುವವನಲ್ಲವೆಂದು, ಅವನ ಪಾಪವೇ ಅವನನ್ನು ಹಿಂಸಿಸಿ ಅಧೋಗತಿ ಪಾಲು ಮಾಡುತ್ತಿದೆಯೆಂದು ಅದರಿಂದ ಅಂತಹ ಮೂಢನಿಗೆ ಜ್ಞಾನವನ್ನು ತಿಳಿದುಕೊಳ್ಳುವ ಅವಕಾಶವೆ ಇಲ್ಲವೆಂದು ತಿಳಿಯುತ್ತದೆ. ಮತ್ತೊಂದು ವಿಚಿತ್ರವೇನೆಂದರೆ! ಗುರುವನ್ನು ನಿಂಧಿಸಿದವನಿಗೆ ಯಾರಿಗೂ ತಿಳಿಯದ ಚಿತ್ರವಾದ ಸಂಘಟನೆಗಳು ಸಹ ನಡೆಯುತ್ತವೆ. ಅವುಗಳನ್ನು ಕುರಿತು ಹೇಳಿದರೂ ಅರ್ಥವಾದವುಗಳಂತಿವೆ. ನಂತರ ಜನ್ಮಗಳಲ್ಲಿ ಪಾಪಗಳನ್ನು ಅನುಭವಿಸಬೇಕಾಗಿರುತ್ತದೆಂದು ಕೃಷ್ಣನು ಹೇಳಿದರೆ, ಆತನು ಹೇಳದ ಸಂಘಟನೆಗಳು, ಈ ಜನ್ಮದಲ್ಲಿಯೆ ನಡೆಯುತ್ತಿರುವುದು ವಿಚಿತ್ರವಲ್ಲವೆ? ಗುರುವನ್ನು ಅವಮಾನಿಸಿದವನಿಗೆ ಈ ಜನ್ಮದಲ್ಲಿಯೂ ಸಹ ಶಿಕ್ಷೆಗಳು ಬೀಳುತ್ತವೆಂದು ತಿಳಿಯುತ್ತದೆ. ಆ ಶಿಕ್ಷೆಗಳನ್ನು ಕುರಿತು ತಿಳಿದುಕೊಳ್ಳುವುದಕ್ಕಿಂತ ಮೊದಲು, ಸ್ವಲ್ಪ ಹೊಸ ವಿವರವನ್ನು ಸಹ ತಿಳಿದುಕೊಳ್ಳಬೇಕಾಗಿದೆ, ಅದೇನೆಂದರೆ!

ಭೂಮಿಮೇಲೆ ಕಾಣಿಸುವ ಸ್ಥೂಲ ಜೀವರಾಶಿಗಳೇ ಅಲ್ಲದೆ, ಕಾಣಿಸದ ಸೂಕ್ಷ್ಮ ಜೀವರಾಶಿಗಳು ಎಷ್ಟೋ ಇವೆ. ಈ ಮಾತನ್ನು ನಾಸ್ತಿಕವಾದಿಗಳು ನಂಬದೆ ಹೋದರೂ ಕಾಣಿಸದ ಎಲ್ಲ ಜೀವರಾಶಿಗಳು ಇರುವುದು ಸತ್ಯ. ಭೂಮಿ ಮೇಲೆಯೇ ಅಲ್ಲದೆ ಖಗೋಳದಲ್ಲಿ ಎಷ್ಟೋ ಸೂಕ್ಷ್ಮಗೋಳ ಗ್ರಹಗಳು ಸಹ ಇವೆ. ಭೂಮಿ ಮೇಲೆ ಗುರು ಬಂದಾಗ ಭೂಮಿಮೇಲೆ ಸ್ಥೂಲ ಜೀವರಾಶಿಗಳಾಗಲಿ, ಸೂಕ್ಷ್ಮ ಜೀವರಾಶಿಗಳಾಗಲಿ ಗುರುವನ್ನು ಗುರುತಿಸಲಾರರು. ಸ್ಥೂಲವಾಗಿರುವವರು ಗುರುತಿಸುವುದಿಲ್ಲವೆಂದು ಮೊದಲೇ ತಿಳಿದುಕೊಂಡಿದ್ದೇವೆ.

ಸ್ಥೂಲಕ್ಕಿಂತ ಸೂಕ್ಷ್ಮದಲ್ಲಿ ಗ್ರಹಿಸುವುದರಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ, ಸೂಕ್ಷ್ಮ ಜೀವರಾಶಿಗಳು ಸಹ ಗುರುವನ್ನು ಗುರುತಿಸದೆ ಹೋಗುತ್ತಿವೆ. ಇನ್ನು ಖಗೋಳದಲ್ಲಿನ ಸೂಕ್ಷ್ಮ ಗೋಳಗ್ರಹಗಳು ಗುರುವನ್ನು ಗುರುತಿಸಬಲ್ಲವು. ಆದ್ದರಿಂದ ಖಗೋಳದಲ್ಲಿನ ಸೂಕ್ಷ್ಮ ಗ್ರಹಗಳು ಭೂಮಿ ಮೇಲೆ ಬಂದು, ಗುರುವಿನ ಹತ್ತಿರ ಜ್ಞಾನವನ್ನು ತಿಳಿದುಕೊಳ್ಳುತ್ತಿರುವರು. ಗುರುವು ಅವರಿಗೆ ಪ್ರತ್ಯೇಕಿಸಿ ಜ್ಞಾನವನ್ನು ಹೇಳದಿದ್ದರೂ, ಮನುಷ್ಯರಿಗೆ ಹೇಳುವಾಗ ಗೋಳಗ್ರಹಗಳು ಸಹ ಜ್ಞಾನವನ್ನು ಶ್ರದ್ಧೆಯಿಂದ ತಿಳಿದುಕೊಳ್ಳುತ್ತಿರುತ್ತಾರೆ. ಮನುಷ್ಯರ ಮಧ್ಯದಲ್ಲಿ ದೊಡ್ಡ ದೊಡ್ಡ ಗ್ರಹಗಳಿದ್ದು ಜ್ಞಾನವನ್ನು ತಿಳಿದುಕೊಳ್ಳುವುದು ನಡೆಯುತ್ತಿರುತ್ತದೆ. ಹಾಗೆ ಜ್ಞಾನವನ್ನು ತಿಳಿದುಕೊಂಡು ಗುರುವಿನ ಮೇಲೆ ಎಷ್ಟೋ ವಿಶ್ವಾಸದಿಂದ ಇರುವರು. ಗುರುವನ್ನು ಯಾರಾದರೂ ದೂಷಿಸಿದರೂ, ಅವಮಾನಮಾಡಿದರೂ ಅವರಿಗೆ ಕೋಪಬರುತ್ತದೆ. ಅಂತಹವರು ಖಗೋಳದಲ್ಲಿ ಅವರ ಸ್ಥಾನದಲ್ಲಿ ಅವರಿದ್ದು, ಆಗಾಗ ಗುರುವಿನ ಹತ್ತಿರಕ್ಕೆ ಬರುತ್ತಾ, ಜ್ಞಾನವನ್ನು ತಿಳಿದುಕೊಳ್ಳುವರು. ಅವರು ಯಾವಾಗ ಬರುವುದು, ಯಾವಾಗ ಹೋಗುವುದು ಮನುಷ್ಯರು ನೋಡಲಾರರು. ಆದ್ದರಿಂದ ಅವರ ಬಂದು ಹೋಗುವಿಕೆ ಒಬ್ಬ ಗುರುವಿಗೆ ಹೊರತು ಯಾರಿಗೂ ತಿಳಿಯದು. ಗುರುವು, ಜ್ಞಾನ ಹೇಳುವಾಗ ನೂರು ಜನ ಮನುಷ್ಯರಿದ್ದರೇ, ಅಲ್ಲಿ ಅವರಿಗಿಂತ ಹೆಚ್ಚಾಗಲಿ, ಕಡಿಮೆಯಾಗಲಿ ಖಗೋಳ ಗ್ರಹಗಳಿರುತ್ತವೆ. ಗುರು ಜ್ಞಾನ ಹೇಳದ ದಿನಗಳಲ್ಲಿ ಸಹ ಗ್ರಹಗಳು ಬಂದು ಗುರುವನ್ನು ದರ್ಶಿಸಿಕೊಂಡು ಹೋಗುತ್ತಿರುವರು. ಹಾಗೆ ಬರುವವರು ಸೂಕ್ಷ್ಮವಾಗಿ ಕಾಣಿಸದೆ ಇರುವರು, ಆದರೆ ಒಂದೊಂದು ಸಲ ನಾವು ಅವರ ಮಧ್ಯದೊಳಗೆ ಹೋಗುವುದಾಗಲಿ ಅಥವಾ ಅವರು ನಮ್ಮ ಮಧ್ಯದಲ್ಲಿ ಇರುವುದಾಗಲಿ ನಡೆಯುತ್ತಿರುತ್ತದೆ. ಅಂತಹ ಸಮಯದಲ್ಲಿ ಅವರ ಸಮಕ್ಷಮದಲ್ಲಿ ಯಾರಾದರು ಗುರುವನ್ನು ನಿಂಧಿಸಿದರೂ, ಅವಮಾನಪಡಿಸಿದರೂ ಅವರಿಗೆ ಗುರುವನ್ನು ದೂಷಿಸಿದವನ ಮೇಲೆ ಕೋಪ ಬರುವುದು. ಅವರಿಗೆ ಕೋಪ ಬಂದರೆ ಅವರ ಕೋಪಕ್ಕೆ ಗುರಿಯಾದವನನ್ನು ಬಿಡದೆ ಯಾವುದೋ ಒಂದು ವಿಧವಾಗಿ ಕಷ್ಟ ನಷ್ಟಗಳನ್ನು ಮಾಡುವುದಾಗಲಿ, ಇಲ್ಲದೆ ರೋಗಗ್ರಸ್ತನನ್ನು ಮಾಡುವುದಾಗಲಿ,

ಇಲ್ಲದೆ ಅವನನ್ನು ಸಾಯಿಸುವುದಾಗಲಿ ನಡೆಯುತ್ತದೆ. ದೇವರಿಗೆ ವಿರುದ್ಧವಾಗಿ ಮಾತನಾಡಿದರೂ, ಸ್ಥೂಲವಾಗಿರುವ ಭಗವಂತನನ್ನು (ಗುರುವು) ದೂಷಿಸಿದರೂ, ಆ ಸಮಯದಲ್ಲಿ ಗ್ರಹಗಳು ಅಲ್ಲಿ ಇದ್ದರೆ ಗುರುವನ್ನು ದೂಷಿಸುವುದು ನೋಡಿದರೆ, ದೂಷಿಸಿದವನಿಗಾಗಲಿ, ಅವಮಾನಿಸಿದವನಿಗಾಗಲಿ ಮುಪ್ಪು ತಪ್ಪುವುದಿಲ್ಲ. ಗುರು ಏನು ಪ್ರತೀಕಾರ ಮಾಡದಿದ್ದರೂ ಗ್ರಹಗಳು ಮಾತ್ರ ಬಿಡುವುದಿಲ್ಲ.

ಉದಾಹರಣೆಗೆ ಎಲ್ಲಯ್ಯ ಎನ್ನುವವನು ಮಲ್ಲಯ್ಯ ಅನ್ನುವವನೊಂದಿಗೆ ಮಾತನಾಡುತ್ತಾ, ಮಲ್ಲಯ್ಯ ಗುರುವನ್ನು ಧೂಷಿಸಿ "ನಿಮ್ಮ ಗುರು ಏನು ಮಾಡುತ್ತಾನೊ ಮಾಡುವುದಕ್ಕೇಳು, ನಾನು ದೂಷಿಸುತ್ತಿದ್ದೇನಲ್ಲ! ನಿಮ್ಮ ಗುರು ಶಕ್ತಿವಂತನಾದರೆ ನನಗೇನಾದರು ಆಗಲಿ, ಹಾಗೆ ಆಗದೆ ಹೋದರೆ ನಿಮ್ಮ ಗುರುವನ್ನು ಹೊಡೆದು ಕಳುಹಿಸುತ್ತೇನೆ" ಎಂದಿದ್ದಾನೆ. ಆ ಸಮಯಕ್ಕೆ ಅಲ್ಲಿ ಗ್ರಹವೊಂದು ಆ ಮಾತುಗಳು ಕೇಳಿ ಹಾಗೆ ಅಂದವನ ಮೇಲೆ ಹೆಚ್ಚಿನ ಕೋಪಗೊಂಡಿರುವುದಾಗಿ ತಕ್ಕ ಸಮಯಕ್ಕಾಗಿ ಕಾದು ನೋಡುತ್ತಿತ್ತು. ಕರ್ಮರೀತ್ಯಾ ಬಲವಾದ ಸಮಯದಲ್ಲಿ ಸೂಕ್ಷ್ಮವಾಗಿರುವ ಖಗೋಳ ಗ್ರಹವು ಅವನ ಮೇಲೆ ದಾಳಿಮಾಡಿ ಅವನನ್ನು ಸಾಯಿಸಿದೆ. ಸ್ಥೂಲವಾಗಿರುವ ಗುರು ಏನು ಅನ್ನದಿದ್ದರೂ, ಆ ಗುರುವಿನ ಮೇಲೆ ಅಭಿಮಾನವಿರುವ ಗ್ರಹವು, ದೂಷಿಸಿದವನನ್ನು ಸಾಯಿಸಿದರೂ ಆ ಮರಣ ಗುಂಡಿಗೆ ನಿಂತು ಹೋಗಿರುವುದರಿಂದ ನಡೆದಿದೆಯೆಂದು ಬಹಳ ಜನ ಅಂದುಕೊಂಡಿದ್ದಾರೆ. ಸತ್ತುಹೋದವನು ಆರೋಗ್ಯವಾಗಿ ಇರುವುದರಿಂದ ಎಲ್ಲರೂ ಆತನ ಗುಂಡಿಗೆ ನಿಂತುಹೋಗಿರುವುದು ನಡೆದಿದೆ ಯೆಂದುಕೊಂಡಿದ್ದಾರೆ. ಒಂದು ವಿಚಿತ್ರವೇ ನೆಂದರೆ! ಸತ್ತುಹೋದ ವ್ಯಕ್ತಿ ಸಾಯುವ ಮೊದಲು ಅಥವಾ ಸಾಯುವ ಸಮಯದಲ್ಲಿ ಬಟ್ಟೆಗಳಲ್ಲಿಯೇ ಮಲಮೂತ್ರ ವಿಸರ್ಜನೆ ಮಾಡಿಕೊಂಡಿರುವುದು ನಡೆದಿದೆ. ಹಾರ್ಟ್ ಫೆಯಿಲ್‌ಗೆ, ಮೂತ್ರ ವಿಸರ್ಜನೆಗೆ ಸಂಬಂಧವಿಲ್ಲವೆಂದು ವೈದ್ಯನಿಪುಣರಾದ ಕೆಲವು ಡಾಕ್ಟರು ಗಳಿಗೆ ತಿಳಿದರೂ ಏನೂ ತೋಚದೆ ಗುಂಡಿಗೆ ನಿಂತುಹೋಗಿರುವುದರಿಂದ ಸತ್ತುಹೋಗಿದ್ದಾನೆಂದು ಹೇಳಿದ್ದಾರೆ. ಸತ್ತುಹೋದವನು ಕೊನೆಯಲ್ಲಿ ಯಾವುದೋ

ಭಯಂಕರ ರೂಪವನ್ನು ನೋಡಿದ್ದರೇನೆ ಆ ವಿಧದಲ್ಲಿ ಮಲ, ಮೂತ್ರ ವಿಸರ್ಜನೆ ಮಾಡಿಕೊಂಡಿದ್ದಾನೆಂದು ಸುಲಭವಾಗಿ ಹೇಳಬಹುದು. ಆದರೆ ಆತನು ಏನು ನೋಡಿರುವುದು, ತನಗೇನು ನಡೆದಿದೆ ಎಂದು ಹೇಳದೆ ಸತ್ತುಹೋಗುವುದು ನಡೆದಿದೆ. ಇನ್ನೊಂದು ವಿಚಿತ್ರವೇನೆಂದರೆ ಆತನು ಸತ್ತುಹೋಗಿರುವುದು ರಾತ್ರಿ ಹೊತ್ತು ಅಲ್ಲ, ನಿರ್ಜನ ಪ್ರಾಂತವು ಅಲ್ಲ. ಹಗಲು ಹೊತ್ತು ಮನುಷ್ಯರ ಮಧ್ಯದಲ್ಲಿ ಕುಳಿತುಕೊಂಡು ಇರುವಾಗ ಪಕ್ಕದಲ್ಲಿರುವವನಿಗೂ ತಿಳಿಯದೆ ಸತ್ತುಹೋಗಿದ್ದಾನೆ. ಇದೆಲ್ಲವು ಸೂಕ್ಷ್ಮವಾಗಿ ನಡೆದಿರುವುದರಿಂದ, ಯಾರಿಗೂ ಯಾವ ಅನುಮಾನವೂ ಬರಲಿಲ್ಲ, ಆದರೆ ಮಲ್ಲಯ್ಯನಿಗೆ ಮಾತ್ರ ಎಲ್ಲಯ್ಯನ ಮರಣದ ಮೇಲೆ ಅನುಮಾನ ಬಂದಿದೆ. ಆತನು ಯಾವ ವಿಧದಲ್ಲಿ ಸತ್ತುಹೋದರೂ ಆ ಮರಣವು ತಮ್ಮ ಗುರುವನ್ನು ನಿಂಧಿಸಿರುವುದರಿಂದ ಬಂದಿದೆಯೆಂದುಕೊಂಡನು. ಗುರುವನ್ನು ನಿಂದಿಸಿರುವು ದರಿಂದಲೆ ಆತನು ಸತ್ತುಹೋದರೂ, ಅದು ಸೂಕ್ಷ್ಮಗ್ರಹದಿಂದ ನಡೆದಿದೆ ಆದ್ದರಿಂದ ಏನೂ ಅರ್ಥವಾಗದೆ ಗುಂಡಿಗೆರೋಗ ಎಂದು ಹೇಳಿದ್ದಾರೆ.

ಗುರುವನ್ನು ನಿಂಧಿಸಿದರೆ ಆತನಿಂದ ಯಾವ ಪ್ರತೀಕಾರವು ಇಲ್ಲದೆ ಹೋಗಬಹುದು. ಆದರೆ ಆ ಸಮಯದಲ್ಲಿ ಅಲ್ಲಿ ಯಾರಾದರೂ ಗುರುವಿನ ಮೇಲೆ ಅಭಿಮಾನ, ಪ್ರೇಮ, ಭಕ್ತಿಯಿರುವ ಸೂಕ್ಷ್ಮರೂಪಗಳಿದ್ದರೆ ನಿಂಧಿಸಿದವನಿಗೆ ತಪ್ಪದೆ ಮುಪ್ಪು ಏರ್ಪಡುತ್ತದೆ. ಹಾಗೆ ಎಷ್ಟೋಜನ ತಿಳಿಯದೆ ಗುರುವನ್ನು ನಿಂಧಿಸಿ, ಎಷ್ಟೋ ನಷ್ಟಹೋದವರಾಗಿದ್ದಾರೆ. ಕೆಲವರು ಕಾಲು, ಕೈಗಳು ಕಳೆದುಕೊಂಡಿದ್ದಾರೆ, ಕೆಲವರು ಮಾತನಾಡುವ ಬಾಯಿಯನ್ನು ಕಳೆದುಕೊಂಡು ಮೂಗರಾಗಿದ್ದಾರೆ. ಕೆಲವರು ಕಣ್ಣಿನ ದೃಷ್ಠಿಯನ್ನು ಕಳೆದುಕೊಂಡಿದ್ದಾರೆ. ಕೆಲವರು ನೇರವಾಗಿ ಪ್ರಾಣವನ್ನೇ ಕಳೆದುಕೊಂಡಿದ್ದಾರೆ. ಸೂಕ್ಷ್ಮಗ್ರಹಗಳು ಹೊರಗಿನ ಆಧಾರವಿಲ್ಲದೆ ಮಾಡುವುದರಿಂದ ಹಾಗೆ ಏಕೆ ನಡೆದಿದೆಯೆಂದು ತಿಳಿಯದೆ ಹೋಗಿದೆ. ಡಾಕ್ಟರುಗಳು ಕಣ್ಣು ಹೋದವನಿಗೆ ವಿಟಮಿನ್ ಲೋಪವೆನ್ನುತ್ತಿದ್ದಾರೆ, ಕಾಲು, ಕೈಗಳು ಬಿದ್ದುಹೋಗಿರುವವನಿಗೆ ನರಗಳ ಲೋಪವೆನ್ನುತ್ತಿದ್ದಾರೆ. ಎಲ್ಲ

ಆರೋಗ್ಯವಾಗಿದ್ದು ಸತ್ತುಹೋದರೆ ಗುಂಡಿಗೆನೋವು ಅನ್ನುತ್ತಿದ್ದಾರೆ. ಆದರೆ ವಾಸ್ತವ ಸ್ಥಿತಿ ಯಾರಿಗೂ ಅರ್ಥವಾಗಲಿಲ್ಲ.

ಗುರುವನ್ನು ಅವಮಾನಿಸುವುದರಿಂದ ಅಥವಾ ದೂಷಿಸುವುದರಿಂದ ಆ ಜನ್ಮದಲ್ಲಿಯೇ ಕೆಲವರಿಗೆ ಪಕ್ಕದಲ್ಲಿರುವ ಗ್ರಹಗಳಿಂದ ನೋವಾಗುವುದೆ ಅಲ್ಲದೆ ನಂತರ ಬರುವ ಜನ್ಮಗಳು ಸಹ ನರಕಪ್ರಾಯವಾಗುತ್ತವೆ. ಪ್ರಪಂಚದಲ್ಲಿ ಇತರರನ್ನು ದೂಷಿಸಿದರೂ, ಅವಮಾನಿಸಿದರೂ, ನೋಯಿಸಿದರೂ, ಮೋಸ ಮಾಡಿದರೂ ಬರುವ ಪಾಪವು ನಂತರ ಜನ್ಮದಲ್ಲಿ ಅನುಭವಿಸಿ ಮುಗಿಸಿ ಕೊಳ್ಳಬಹುದು. ಹಾಗೆ ಅನುಭವಿಸಿ ಇಲ್ಲದಂತೆ ಮಾಡಿಕೊಳ್ಳುವುದು ಒಂದು ಪದ್ಧತಿಯಾದರೆ, ಜ್ಞಾನ ತಿಳಿದು ಯೋಗ ಮಾಡಿ, ಜ್ಞಾನಾಗ್ನಿಯನ್ನು ಸಂಪಾದಿ ಸಿಕೊಂಡು, ಆ ಅಗ್ನಿಯಿಂದ ಹಿಂದಿನ ಜನ್ಮದಲ್ಲಿ ಮಾಡಿಕೊಂಡ ಪಾಪವನ್ನು ಸುಟ್ಟುಹಾಕಬಹುದು. ಇದರಿಂದ ಪ್ರಪಂಚದಲ್ಲಿ ಮನುಷ್ಯರ ಬಗ್ಗೆ ಮಾಡಿದ ಪಾಪವನ್ನು ಅನುಭವಿಸಿಯಾಗಲಿ, ಅನುಭವಿಸದೆ ಜ್ಞಾನದಿಂದಾಗಲಿ ಇಲ್ಲದಹಾಗೆ ಮಾಡಿಕೊಳ್ಳಬಹುದು. ಆದರೆ ಸಾಕಾರ ಗುರುವಿನ ಬಗ್ಗೆಯಾಗಲಿ, ನಿರಾಕಾರ ದೇವರ ಬಗ್ಗೆಯಾಗಲಿ ಮಾಡಿಕೊಂಡ ಪಾಪವನ್ನು ತಪ್ಪದೆ ಅನುಭವಿ ಸಬೇಕಾಗಿರುತ್ತದೆ. ದೇವರ ಜ್ಞಾನಶಕ್ತಿಯಿಂದ ಅದು ಸುಡುವುದಿಲ್ಲ. ಗುರುವಿನ ಬಗ್ಗೆಯಾಗಲಿ, ದೇವರ ಬಗ್ಗೆಯಾಗಲಿ ಒಂದು ಜನ್ಮದಲ್ಲಿ ಮಾಡಿಕೊಂಡ ಪಾಪ ನಂತರ ಬರುವ ಜನ್ಮದಲ್ಲಿ ಅನುಭವಿಸಿದರೂ ಮುಗಿದುಹೋಗುವುದಿಲ್ಲ. ದೈವ ದೂಷಣ ಅಥವಾ ಗುರುದೂಷಣೆಯಿಂದ ಏರ್ಪಟ್ಟ ಪಾಪವು ಯುಗಯುಗ ಗಳ ಪರ್ಯಂತವು ಅನುಭವಿಸಬೇಕಾಗಿರುತ್ತದೆ. ದೇವರನ್ನು ಪ್ರಾರ್ಥಿಸಿದರೂ, ದೇವರು ಸಹ ಆ ಪಾಪವನ್ನು ಕ್ಷಮಿಸುವುದಿಲ್ಲ. ಆದ್ದರಿಂದ ಅಂತಹ ಪಾಪವನ್ನು ಕ್ಷಮಿಸಲಾಗದ ಪಾಪ ಅನ್ನುತ್ತೇವೆ. ದೈವ, ಗುರು ದೂಷಣೆಯಿಂದ ಅನೇಕ ಯುಗಗಳಲ್ಲಿ ಅನೇಕ ಜನ್ಮಗಳು ಹೊಂದಿ ಅನೇಕವಾದ ನೋವುಗಳನ್ನು ಅನುಭವಿಸಬೇಕಾಗಿರುವುದೆಂದು, ಇತ್ತ ಭಾರತ ದೇಶದಲ್ಲಿನ ಭಗವದ್ಗೀತೆಯಲ್ಲೂ, ಅತ್ತ ವಿದೇಶಗಳಲ್ಲಿನ ಮತಗ್ರಂಥಗಳಲ್ಲಿಯೂ ಸಹ ಹೇಳಲಾಗಿದೆ. ಇದರಿಂದ

ನೀನು ಯಾವ ಮತಸ್ಥನಾದರು ದೇವರನ್ನು ದೂಷಿಸಿದರೆ ಕ್ಷಮಿಸಲಾಗದ ಪಾಪ ತಪ್ಪುವುದಿಲ್ಲ, ಆದ್ದರಿಂದ ಎಲ್ಲ ಮತಗಳಿಗೂ ದೊಡ್ಡವನಾದ ದೇವರನ್ನು ನಾನು ಪರಮತಸ್ಥನಲ್ಲವೆ! ಇತರ ಮತ ದೇವರನ್ನು ದೂಷಿಸಿದ್ದೇನಲ್ಲ ಎಂದು ಅಂದುಕೊಂಡರೂ, ಪಾಪವು ನಿನ್ನನ್ನು ಬಿಡುವುದಿಲ್ಲ. ಏಕೆಂದರೆ ಸರ್ವ ಸೃಷ್ಠಿಗೂ, ಸರ್ವಮತಗಳಿಗೂ ಅಧಿಪತಿ ದೇವರೊಬ್ಬನೇ. ಆದ್ದರಿಂದ ಇಂದೂ ಮತದಲ್ಲಿನ ದೇವರಾದ ಪರಮಾತ್ಮನನ್ನು ಇಲ್ಲವೆ ಭಗಂತನಾದ ಕೃಷ್ಣನನ್ನು ಪರಮತಸ್ಥನು ದೂಷಿಸಿದರೂ, ಪರಮತದಲ್ಲಿನ ದೇವರಾದವನನ್ನು ಹಿಂದೂ ದೂಷಿಸಿದರು ಕ್ಷಮಿಸಲಾಗದ ಪಾಪ ಬರುವುದಕ್ಕೆ ಅವಕಾಶವಿದೆ. ಆದ್ದರಿಂದ ಜಾಗ್ರತೆಹೊಂದಿ ಜ್ಞಾನವನ್ನು ಸಂಪಾಧಿಸಿಕೊಂಡು ದೇವರನ್ನು ದೂಷಿಸದೆ, ಜೀವನವನ್ನು ಸಾಗಿಸಬೇಕೆಂದು ಕೋರುತ್ತೇವೆ.



# ಗುರುವು ಕಾಡಿನಲ್ಲಿ ಇರುತ್ತಾನಾ ಅಥವಾ ಊರಿನಲ್ಲಿ ಇರುತ್ತಾನಾ?

ಗುರು ಎನ್ನುವವನು ಪ್ರಜೆಗಳ ಮಧ್ಯದಲ್ಲಿ ಇರುವುದಿಲ್ಲವೆಂದು, ಜನ ಸಂಚಾರವಿಲ್ಲದ ಕಾಡಿನಲ್ಲಿ, ಗುಹೆಗಳಲ್ಲಿ ಇರುವನೆಂದು, ನಮಗೆ ಜ್ಞಾನ ಅಗತ್ಯವಾದಾಗ ಅರಣ್ಯದಲ್ಲಿ ಅಥವಾ ಗುಹೆಗಳಲ್ಲಿರುವ ಗುರುವನ್ನು ಹುಡುಕುತ್ತಾ ಹೋಗಿ ಗುರೂಪದೇಶ ತೆಗೆದುಕೊಳ್ಳಬೇಕೆಂದು ಕೆಲವರನ್ನುತ್ತಿರುತ್ತಾರೆ. ಅಷ್ಟೇ ಅಲ್ಲದೆ ಗುರುವನ್ನು ಶಿಷ್ಯನೇ ಹುಡುಕುತ್ತಾ ಹೋಗಬೇಕು. ಆದರೆ ಗುರುಶಿಷ್ಯನನ್ನು ಹುಡುಕುತ್ತಾ ಬರುವುದಿಲ್ಲವೆಂದು ಸಹ ಹೇಳುತ್ತಿರುತ್ತಾರೆ. ಈ ಮಾತುಗಳನ್ನು ಕೇಳಿದ ಕೆಲವರು ಸಾಮಾನ್ಯ ಜನರು ಊರಿನಲ್ಲಿ ಜ್ಞಾನವನ್ನು ಹೇಳುವವನು ಗುರು ಅಲ್ಲವೆಂದು, ಗುರು ಅರಣ್ಯದಲ್ಲಿ ಇರುತ್ತಾನೆಂದು ಗುರೂಪದೇಶ ಅಗತ್ಯ ವಾದಾಗ ಕಾಡಿಗೆ ಹೋಗಿ ಗುರುವನ್ನು ಹುಡುಕಿಕೊಳ್ಳಬೇಕೆಂದು ಅಂದು ಕೊಳ್ಳುವರು. ಅಂತಹವರನ್ನು ಉದ್ದೇಶಿಸಿ ವೇಮನಯೋಗಿ ಏನೆಂದಿದ್ದಾ ನೆಂದರೆ!

***ಗುಹೆಗಳೊಳಗೆ ಹೊಕ್ಕು ಗುರುಗಳನ್ನುಡುಕಲು***
***ಕ್ರೂರಮೃಗವೊಂದು ದಾರಿ ಕಾದು***
***ಮೊದಲು ಮುಕ್ತಿ ಮಾರ್ಗವದೇ ತೋರಿಸುವುದು***
***ವಿಶ್ವದಾಭಿರಾಮ ಕೇಳೊವೇಮಾ.***

ವೇಮನ ಹೇಳಿದ ಈ ಪದ್ಯವು ಎಲ್ಲರಿಗು ಸುಲಭವಾಗಿ ಅರ್ಥವಾಗಿರುತ್ತದೆ. ಆತನು ಹೇಳಿದ ಮಾತುಗಳಲ್ಲಿ ಗುರುಗಳು ಕಾಡಿನಲ್ಲಿ ಇರುವುದಿಲ್ಲವೆಂದು ತಿಳಿಯುತ್ತದೆ. ಪೂರ್ವದಲ್ಲಿ ಕೆಲವರು ರಾಜರು ತಮ್ಮ ರಾಜ್ಯವನ್ನು ಅವರ ವಾರಸುದಾರರಿಗೆ ಒಪ್ಪಿಸಿ ಮಕ್ಕಳ ಬಂಧವನ್ನು ತ್ಯಜಿಸಿ ಕಾಡಿಗೆ ಹೋಗಿ, ಅಲ್ಲಿ ತಪಸ್ಸು ಮಾಡಿಕೊಳ್ಳುತ್ತಿದ್ದರಂತೆ, ನಿರ್ಜನ ಪ್ರದೇಶವಾದ ಕಾಡಿನಲ್ಲಿ ಅವರ ತಪಸ್ಸಿಗೆ ಭಂಗವಾಗದೆಂದು ಭಾವಿಸಿ, ಹಾಗೆ ಕಾಡಿಗೆ ಹೋಗಿ ತಮ್ಮವರಿಗೆ ದೂರವಾಗಿ ಇದ್ದೂ ಮೋಹಗುಣವನ್ನು ಸ್ಥಗಿತ ಮಾಡಿಕೊಳ್ಳುತ್ತಿದ್ದರು. ಹಾಗೆ ಅವರು ಬಿಡಿಸಿಕೊಳ್ಳಬೇಕೆಂದರೂ ಅವರ ಮಕ್ಕಳು ಕೆಲವರು ಕಾಡಿಗೆ ಹೋಗಿ ಅಲ್ಲಿ ಅವರ ತಾಯಿತಂದೆಯರೊಂದಿಗೆ ಬೇಟಿಮಾಡಿ ಬರುವುದು ನಡೆಯುತ್ತಿರುತ್ತಿತ್ತು. ಹಾಗೆ ಸ್ವಲ್ಪಕಾಲ ನಡೆಯುತ್ತಾ ಅವರೊಂದಿಗೆ, ಅವರ ಬಂಧುಗಳು ಸಹ ಕಾಡಿಗೆ ಹೋಗಿ ಮಾತನಾಡಿಸಿ ಬರುವುದರಿಂದ ಕೊನೆಗೆ ಕಾಡಿನಲ್ಲಿದ್ದರೂ, ಊರಿನಲ್ಲಿದ್ದಹಾಗೆ ಎಲ್ಲ ಸಂಬಂಧಗಳು ಜೊತೆಯಾಗುವುದು ನಡೆಯುತ್ತಿತ್ತು. ಪ್ರಶಾಂತತೆಗಾಗಿ ಕಾಡಿಗೆ ಹೋಗಿ ಮೂಗು ಮುಚ್ಚಿಕೊಂಡು ಜಪವೊ, ತಪವೊ ಮಾಡಿಕೊಳ್ಳಬೇಕೆಂದವರಿಗೆ ಕಾಡಿನಲ್ಲಿನ ಅಡ್ರಸ್ ಸಹ ತಮ್ಮ ಮಕ್ಕಳಿಗೆ ಬಂಧುಗಳಿಗೆ ತಿಳಿಯುವುದರಿಂದ, ಅಲ್ಲಿಯು ಸಹ ಕುಟುಂಬ ಕರ್ತವ್ಯಗಳಲ್ಲಿ ಸಿಲುಕಿಕೊಂಡು, ಶೇಷಜೀವನ ಪ್ರಶಾಂತವಾಗಿ ಕಳೆಯುವುದಕ್ಕೆ ಅವಕಾಶ ಇಲ್ಲದೆ ಹೋಗುತ್ತಿತ್ತು. ಆದ್ದರಿಂದ ಕೆಲವರು ಕಾಡಿನಲ್ಲಿಯೂ ಸಹ ಅವರ ಅಡ್ರೆಸ್ ಬಂಧುಗಳಿಗೆ ದೊರಕದ ಹಾಗೆ, ಗುಹೆಗಳಲ್ಲಿ ಕಾಲ ಕಳೆಯುತ್ತಿದ್ದರು. ಆ ವಿಧವಾಗಿ ಪೂರ್ವದಲ್ಲಿ ಕೆಲವರು ರಾಜರು ಕಾಡುಗಳಲ್ಲಿಯೂ, ಮತ್ತೆ ಕೆಲವರು ಗುಹೆಗಳಲ್ಲಿಯೂ ನಿವಾಸ ಏರ್ಪಡಿಸಿಕೊಂಡು ಇರುತ್ತಿದ್ದರಂತೆ. ಹಾಗೆ ಕಾಡಿನಲ್ಲಾಗಲಿ, ಗುಹೆ

ಗಳಲ್ಲಾಗಲಿ ಇರುವವರ ಮೇಲೆ ಊರಿನಲ್ಲಿರುವವರಿಗೆ ದೊಡ್ಡ ಭಾವನೆಯಿರುತ್ತಿತ್ತು. ಕಾಡಿನಲ್ಲಿ ದೈವಜ್ಞಾನವನ್ನು ಮೆಲುಕುಹಾಕುತ್ತಾ ಕಾಲ ಕಳೆಯುವವರು ದೊಡ್ಡ ಜ್ಞಾನಿಗಳೆಂದು ಊರಿನಲ್ಲಿನ ಪ್ರಜೆಗಳು ಅಂದುಕೊಳ್ಳುತ್ತಿದ್ದರು.

ಕಾಲ ಕಳೆದಂಂತೆಲ್ಲಾ ರಾಜರ ಕಾಲ ಹೋಗಿ ಈಗಿನ ಕಾಲ ಬಂದಿದೆ. ಈಗಿನ ಕಾಲಬಂದರೂ ಪೂರ್ವದಲ್ಲಿ ಅಂದುಕೊಂಡಹಾಗೆ ಕೆಲವರು ಕಾಡುಗಳಲ್ಲಿಯೂ, ಗುಹೆಗಳಲ್ಲಿಯೂ ತಪಸ್ಸು ಮಾಡುವ ಮುನಿಗಳಿರುತ್ತಾರೆಂದು ಅಂದುಕೊಳ್ಳುವುದು ನಡೆಯುತ್ತದೆ. ಯಾರಿಗಾದರು ವೈರಾಗ್ಯ ಬಂದು, ಜ್ಞಾನ ಬೇಕೆಂದುಕೊಂಡಾಗ ಕಾಡುಗಳಲ್ಲಿಯು, ಗುಹೆಗಳಲ್ಲಿಯು ರಹಸ್ಯವಾಗಿ ತಪಸ್ಸು ಮಾಡುವವರ ಹತ್ತಿರಕ್ಕೆ ಹೋದರೆ ನಾವು ಸಹ ಪೂರ್ತಿ ಜ್ಞಾನಿಗಳಾಗಿ ಬದಲಾಗುತ್ತೇವೆಂದು ಅಂದುಕೊಳ್ಳುತ್ತಿರುವರು. ಊರಿನಲ್ಲಿ ಜ್ಞಾನ ಹೇಳುವವರಿಗೆ ಎಷ್ಟೋ ಬಂಧನಗಳಿವೆ. ಇವರು ಹೇಳುವ ಬೋಧನೆಯನ್ನು ಕೇಳಿದರೂ, ಅದರಿಂದ ನಮಗೆ ಯಾವ ಬಂಧನಗಳು ಹೋಗುವುದಿಲ್ಲ. ಆದರೆ ಕಾಡಿನಲ್ಲಿ ಅಜ್ಞಾತವಾಗಿರುವವರನ್ನು ಸೇರಿಕೊಂಡರೆ, ನಮಗೂ ಸಹ ಬಂಧನಗಳು ಹೋಗಿ ಅವರಹಾಗೆ ಬದಲಾಗಿಹೋಗುತ್ತೇವೆಂದು ಅಂದುಕೊಂಡು, ಅವರಿಗೆ ವೈರಾಗ್ಯ ಬಂದಾಗ ಎಲ್ಲವನ್ನು ಬಿಟ್ಟು ಕಾಡಿಗೆ ಹೋಗಬೇಕೆಂದುಕೊಳ್ಳುತ್ತಿದ್ದರು. ಹಾಗೆ ಹೋದರೂ, ಕಾಡುಗಳಲ್ಲಿ ಹುಡುಕಿದರೂ, ಅಲ್ಲಿ ಯಾರೂ ಕಾಣಿಸುವುದಿಲ್ಲ. ಪೂರ್ವದಲ್ಲಿ ಕೆಲವರು ರಾಜರು ಮೊದಲಾದವರು ಕಾಡಿಗೆ ಹೋದ ಮಾತು ವಾಸ್ತವವೇ. ಅದು ಪೂರ್ವಕಾಲದ ಮಾತು. ಆಗಿನವರು ಇಂದಿಗೂ ಕಾಡುಗಳಲ್ಲಿ ಏಕೆ ಇರುತ್ತಾರೆ? ಆ ದಿನವೇ ಕಾಲತೀರಿ ಆಯಷ್ಷು ಮುಗಿದುಹೋಗಿ ಸತ್ತು ಹೋಗಿರುತ್ತಾರೆ. ಕಾಡುಗಳಲ್ಲಿ ತಪಸ್ಸು ಮಾಡುತ್ತಾ, ಧೀರ್ಘಕಾಲ ಬದುಕುವವರು ಆ ದಿನ ಇಲ್ಲ, ಈ ದಿನವು ಇಲ್ಲ. ಉಳಿದ ಸ್ವಲ್ಪ ಶೇಷಜೀವನ ಪ್ರಶಾಂತವಾಗಿ ದೈವಜ್ಞಾನದಲ್ಲಿ ಕಳೆಯಬೇಕೆನ್ನುವವರು, ಕಾಡಿಗೆ ಹೋದರೂ ಅವರು ಇಲ್ಲಿಯವರೆಗು ಇರುವುದಿಲ್ಲ ತಾನೆ! ಒಂದು ವೇಳೆ ಈ ಕಾಲದಲ್ಲಿ ಜ್ಞಾನಕ್ಕಾಗಿ ಕಾಡಿನೊಳಗೆ ಹೋಗಿ, ಯಾರಿಗೂ ತಿಳಿಯದಂತಿರುವ ಮಹರ್ಷಿ ಗಳೊಂದಿಗೆ

ಮಾತನಾಡಿ ಬರಬೇಕೆಂದುಕೊಂಡರೂ, ಅವರು ಕಾಣಿಸುವುದಿಲ್ಲ ಆದರೆ ಕಾಡು ಮೃಗಗಳೆ ಕಾಣಿಸುತ್ತವೆ. ಯಾರಾದರು ತಿಳಿಯದೆ ಕಾಡಿನಲ್ಲಿ ಯಾರೋ ತನ್ನನ್ನು ಉದ್ಧರಿಸುವವರಿದ್ದಾರೆಂದು, ಅವರು ತನಗೆ ಮೋಕ್ಷವನ್ನು ತೋರಿಸುತ್ತಾರೆಂದು ಕೊಂಡು ಕಾಡಿಗೆ ಹೋದರೆ, ಅಲ್ಲಿ ಹಸಿದುಕೊಂಡ ಮೃಗ ಎದುರುಬಿದ್ದರೆ ಮಹರ್ಷಿಗಳಿಗಿಂತ ಮೊದಲು ಮುಕ್ತಿಯನ್ನು ಆ ಮೃಗವೆ ತೋರಿಸುತ್ತದೆಂದು ವೇಮನಯೋಗಿ ಹೇಳಿದ್ದಾನೆ. ಅಂದರೆ ನೀನಂದುಕೊಂಡ ಮಾತು ಏನೊ ಆದರೆ, ಹಸಿದುಕೊಂಡ ಮೃಗ ತನ್ನ ಹಸಿವಿಗಾಗಿ ನಿನ್ನನ್ನು ಸಾಯಿಸಿ ತಿನ್ನುತ್ತದೆಂದು, ಸಾವು ಅನ್ನುವ ಮುಕ್ತಿಯನ್ನು ಮೃಗ ತೋರಿಸುತ್ತದೆಂದು ಹೇಳಿದ್ದಾನೆ. ಶಾಶ್ವತವಾಗಿ ದೇಹದಿಂದ ಮುಕ್ತಿಯನ್ನು ಗುರುವು ತೋರಿ ಸುವವನಾದರೆ ತಾತ್ಕಾಲಿಕವಾಗಿ ದೇಹ ಮುಕ್ತಿಯನ್ನು ಮೃಗ ತೋರಿಸುತ್ತದೆಂದು, ಹಾಗೆ ಹೋಗುವುದು ಒಳ್ಳೆಯದಲ್ಲವೆಂದು, ಗುರು ಕಾಡಿನಲ್ಲಿ ಇರುವುದಿಲ್ಲವೆಂದು, ನಮಗೆ ಅರ್ಥವಾಗುವ ಹಾಗೆ ವೇಮನ ಆ ಪದ್ಯವನ್ನು ಹೇಳಿದ್ದಾನೆ.

ವೇಮನಯೋಗಿ ಹೇಳಿದ ಮಾತು ವಾಸ್ತವವೇ ತಾನೆ! ಗುರು ಮನುಷ್ಯರಿಗೆ ಜ್ಞಾನ ಹೇಳುವುದಕ್ಕೆ ಭೂಮಿ ಮೇಲೆ ಅವತರಿಸುತ್ತಾನೆಂದು ಹೇಳಿಕೊಂಡಿದ್ದೇವೆ. ಮನುಷ್ಯರಿಗಾಗಿ ಅದೇ ಉದ್ದೇಶವಾಗಿ ಬಂದಿರುವ ಗುರು, ಮನುಷ್ಯರಿರುವ ಕಡೆ ಇಲ್ಲದೆ ಪ್ರಾಣಿಗಳಿರುವ ಕಾಡಿನೊಳಗೆ ಏಕೆ ಹೋಗುವನು? ಶರೀರವಿಲ್ಲದ ದೇವರು ಶರೀರವಿರುವ ಗುರುವಾಗಿ ಭೂಮಿಮೇಲೆ ಕಾಣಿಸಿ ಕೊಂಡು, ಮನುಷ್ಯರ ಮಧ್ಯದಲ್ಲಿದ್ದು, ಮನುಷ್ಯರಿಂದ ಸಂಬಂಧವೇರ್ಪಡಿಸಿ ಕೊಂಡು ಸಂದರ್ಭಾನುಸಾರ ಜ್ಞಾನ ತಿಳಿಸುವನು. ಪ್ರಜೆಗಳಿಗೆ ಜ್ಞಾನ ತಿಳಿಸುವುದೇ ಆತನ ಉದ್ದೇಶವಾಗಿರುವಾಗ ಪ್ರಜೆಗಳಿರುವ ಊರಿನಲ್ಲಿರದೆ, ಪ್ರಾಣಿಗಳಿರುವ ಕಾಡಿನೊಳಗೆ ಏಕಿರುವನು? ಗುರು ಕಾಡಿನಲ್ಲಿ ಇರುತ್ತಾನೆನ್ನುವುದು ಅಸತ್ಯ. ಗುರು ಯಾವಾಗ ಅವತರಿಸಿದರೂ ಪ್ರಜೆಗಳ ಮಧ್ಯದಲ್ಲಿ ಊರಿನಲ್ಲಿಯೇ ಇರುತ್ತಾನೆ.



# ಗುರುವಿಗೆ ಶಿಷ್ಯರಿರುತ್ತಾರಾ?

ಇದೇನು ಪ್ರಶ್ನೆ? ಗುರು ಅಂದ ಮೇಲೆ ಶಿಷ್ಯರು ಇಲ್ಲದೆ ಹೇಗಿರುತ್ತಾನೆ? ಎಂದು ನೀವು ಎದುರು ಪ್ರಶ್ನೆ ಕೇಳಬಹುದು. ಇಲ್ಲಿ ವಿಚಿತ್ರವೇನೆಂದರೆ ಗುರುವಿಗೆ ಶಿಷ್ಯರಿರುವುದಿಲ್ಲ. ಶಿಷ್ಯರು ಇಲ್ಲದೆಹೋದರೆ ಗುರುವು ಹೇಗೆ ಆಗುತ್ತಾನೆಂದು ನೀವು ಪ್ರಶ್ನಿಸಬಹುದು. ಅದಕ್ಕೆ ಉತ್ತರ ಈ ವಿಧವಾಗಿ ಇದೆ. ಗುರುವು ಪ್ರಜೆಗಳಿಗೆ ಧರ್ಮದಿಂದ ಕೂಡಿಕೊಂಡಿರುವ ದೈವಜ್ಞಾನವನ್ನು ತಿಳಿಸುವುದಕ್ಕೆ ಭೂಮಿಮೇಲೆ ಬರಬಹುದು. ಆದರೆ ಶಿಷ್ಯರನ್ನು ತಯಾರು ಮಾಡಿಕೊಳ್ಳುವುದಕ್ಕಲ್ಲ. ಗುರುವು ಭೂಮಿಮೇಲೆ ಬಂದಿರುವ ಉದ್ದೇಶ ಧರ್ಮ ಯುಕ್ತವಾದ ಜ್ಞಾನ ತಿಳಿಸುವುದು. ಅಷ್ಟೇಯಾಗಲಿ ಯಾರೊಬ್ಬರನ್ನು ಶಿಷ್ಯನೆಂದು ಹೇಳಿಕೊಳ್ಳುವುದಕ್ಕೆ ಬರುವುದಿಲ್ಲ. ಗುರು ಭೂಮಿಮೇಲೆ ಲಕ್ಷ ವರ್ಷಗಳಿಗೊ, ಕೋಟಿ ವರ್ಷಗಳಿಗೊ ಒಂದು ಬಾರಿ ಬಂದರೆ, ಯಾರಿಗೂ ಗುರುವಾಗಿ ಗುರುತಿಲ್ಲದ ಹಾಗೆ, ಅಜ್ಞಾತವಾಗಿ ಪ್ರಜೆಗಳ ಮಧ್ಯದಲ್ಲಿದ್ದು, ಸಂದರ್ಭ ಬಂದಾಗ ಮಾತ್ರವೆ, ಜ್ಞಾನ ಹೇಳುವನೆಂದು ಮೊದಲೆ ತಿಳಿದುಕೊಂಡಿದ್ದೇವೆ. ಪ್ರಜೆಗಳಿಗೆ ಈತನು ಗುರುವು ಎಂದು ತಿಳಿಯದ ಹಾಗೆ ಇರುವುದರಿಂದ, ಶಿಷ್ಯರು ಏರ್ಪಡುವುದಕ್ಕೆ ಅವಕಾಶವೇ ಇಲ್ಲವಲ್ಲ! "ನಾನು ಗುರುವು" ಎಂದು ಬೋರ್ಡು ಇಟ್ಟುಕೊಂಡವನ ಹತ್ತಿರಕ್ಕೆ ಯಾರಾದರು ಹೋಗಿ ಶಿಷ್ಯರು ಆಗಬಹುದು. ಆದರೆ ಇಂತಹವನೇ ಗುರುವು ಎಂದು ತಿಳಿಯದಿರುವಾಗ, ಯಾರೂ ಆತನ ಹತ್ತಿರ ಶಿಷ್ಯನಾಗುವ ಅವಕಾಶವೇ ಇಲ್ಲ. ಆದ್ದರಿಂದ **ನಿಜಗುರುವಿಗೆ ಶಿಷ್ಯರಿರುವುದಿಲ್ಲ.**

ದ್ವಾಪರಯುಗದಲ್ಲಿ ಗುರು ಕೃಷ್ಣನ ರೂಪದಲ್ಲಿ ಬಂದಾಗ, ಶ್ರೀ ಕೃಷ್ಣನಿಗೆ ಒಬ್ಬ ಶಿಷ್ಯನೂ ಇಲ್ಲವೆಂದು ಮರೆತುಹೋಗಬಾರದು. ಕನಿಷ್ಟ ಒಬ್ಬ ಶಿಷ್ಯನು ಸಹ ಇಲ್ಲದ ಕೃಷ್ಣನು, ಭೂಮಿಮೇಲಿಂದ ಹೋದ ನಂತರ ಬಹಳಜನ ಜ್ಞಾನಿಗಳು, ಯೋಗಿಗಳು **ಕೃಷ್ಣನನ್ನು ಜಗದ್ಗುರು** ಎಂದಿದ್ದಾರೆ. ಶಿಷ್ಯರೇ ಇಲ್ಲದಿರುವಾಗ ಆತನು ಜಗದ್ಗುರುವೆಂದು ಹೇಗೆ ಹೆಸರು ಪಡೆದಿದ್ದಾನೆಂದು ಕೇಳಬಹುದು. ಅದಕ್ಕೆ ಸಮಾಧಾನವೇನೆಂದರೆ! ಈ ಕಾಲದಲ್ಲಿ ಹೆಸರುಪಡೆದ ಅದ್ವೈತ ಪೀಠ ಇದೆ ಅಲ್ಲವೆ! ಅದ್ವೈತ ಸಿದ್ಧಾಂತ ಕರ್ತ ಆದಿಶಂಕರಾಚಾರ್ಯರೆಂದು ಎಲ್ಲರಿಗು

ತಿಳಿದಿದೆ. ಆದಿ ಶಂಕರಾಚಾರ್ಯರನ್ನು ಅವರ ಶಿಷ್ಯರು "ಜಗದ್ಗುರು" ಎಂದು ಅನ್ನುತ್ತಿದ್ದಾರೆ. ಆದಿ ಶಂಕರಾಚಾರ್ಯರು ಗುರುವೇ ಅಲ್ಲವೆ! ಆತನನ್ನು ಜಗದ್ಗುರು ಎಂದು ಏಕೆ ಅನ್ನುತ್ತಿದ್ದಾರೆಂದು ಪ್ರಶ್ನಿಸಿದರೆ ಕೆಲವರು ಹೀಗೆ ಸಮಾಧಾನ ಹೇಳುತ್ತಾ "ಶಂಕರಾಚಾರ್ಯರು ಗುರುವೇ ಆಗಿರುವಾಗ ಆತನ ಶಿಷ್ಯರು ಜಗತ್ತೆಲ್ಲವೂ ಇರುವುದರಿಂದ ಮತ್ತು ಆತನಿಗೆ ಶಿಷ್ಯರು ಹೆಚ್ಚು ಮಂದಿ ಇರುವುದರಿಂದ ಶಂಕರಾಚಾರ್ಯನನ್ನು "ಜಗದ್ಗುರು" ಎಂದು ಅನ್ನುತ್ತೇವೆಂದು ಅವರಿಗೆ ತಿಳಿದ ಮಾತು ಅವರು ಹೇಳಿದರು. ಅವರು ಹೇಳಿದಾಗ ಕೇಳಬೇಕಾದ್ದೆ, ಕೇಳಿದ ನಂತರ ಅದು ಸತ್ಯವೊ ಅಸತ್ಯವೊ ಎಂದು ಯೋಚಿಸಿ ನೋಡಬೇಕಾದ್ದೆ. ಹಾಗೆ ಯೋಚಿಸಿದರೆ ಎರಡು ಸಾವಿರ ವರ್ಷಗಳ ಹಿಂದೆ ಹುಟ್ಟಿದ ಶಂಕರಾಚಾರ್ಯರು ಅನೇಕ ಮಂದಿ ಶಿಷ್ಯರನ್ನು ಹೊಂದಿ ಜಗದ್ಗುರು ಎಂದು ಹೆಸರು ಪಡೆದಿದ್ದರೆ, ಐದು ಸಾವಿರ ವರ್ಷಗಳ ಹಿಂದೆ ಹುಟ್ಟಿದ ಕೃಷ್ಣನು ಒಬ್ಬ ಶಿಷ್ಯನನ್ನು ಸಹ ಇಟ್ಟುಕೊಳ್ಳದೆ ಹೇಗೆ ಜಗದ್ಗುರುವಾಗಿದ್ದಾನೆಂಬ ಪ್ರಶ್ನೆ ಬರಬಹುದು. ಅದಕ್ಕೆ ಉತ್ತರವನ್ನು ಹುಡುಕಿದರೆ ಹೀಗೆ ತಿಳಿಯುತ್ತದೆ. **"ಜಗತ್ತಿನಲ್ಲಿರುವ ಸಮಸ್ತ ಜೀವರಾಶಿಗಳಿಗೆ ಅನ್ವಯಿಸುವ ಜ್ಞಾನವನ್ನು ಹೇಳಿದವನು ಜಗದ್ಗುರು"** ಎನ್ನುವ ಸೂತ್ರದ ಪ್ರಕಾರ ಕೃಷ್ಣನು ಜಗದ್ಗುರುವಾಗಿದ್ದಾನೆ. ಕೃಷ್ಣನು ಬೋಧಿಸಿದ ಜ್ಞಾನವನ್ನನುಸರಿಸಿ ಗುರುವಾಗಿದ್ದಾನೆ, ಆದರೆ ಶಿಷ್ಯರನ್ನನುಸರಿಸಿ ಗುರುವಾಗಿಲ್ಲ. ಶಿಷ್ಯರಿರುವವನು ಗುರು ಅನ್ನುವ ಮಾತು ಸರಿಯಾದದ್ದಲ್ಲ ಮತ್ತು ಅದು ಸೂತ್ರವು ಅಲ್ಲ. ಒಂದುವೇಳೆ ಯಾರಾದರು ಶಿಷ್ಯರನ್ನು ಅನುಸರಿಸಿ ಗುರು ಎನ್ನುವ ಸೂತ್ರವನ್ನು ನಂಬಿದರೆ, ಅದರ ಪ್ರಕಾರ ಇಬ್ಬರು ಶಿಷ್ಯರಿರುವವನು ಸಹ ಗುರುವೇ ಆಗುತ್ತಾನೆ. ಆ ಲೆಕ್ಕ ಪ್ರಕಾರವಾದರೆ, ಈಗಿನ ಕಾಲದಲ್ಲಿ ಹತ್ತುಜನ ಶಿಷ್ಯರಿಂದ ಸಾವಿರ ಸಂಖ್ಯೆವರೆಗು ಶಿಷ್ಯರಿರುವ ಗುರುಗಳು ಭೂಮಿಮೇಲೆ ಕೆಲವು ಸಾವಿರಜನ ಇದ್ದಾರೆಂದು ಹೇಳಬಹುದು. ಯಾವಾಗಾದರೂ ಭೂಮಿ ಮೇಲೆ ಗುರು ಒಬ್ಬನೇ ಇರುತ್ತಾನೆ ಎನ್ನುವುದು ಸೂತ್ರ. ಅನೇಕ ಜನ ಗುರುಗಳು ಏಕಕಾಲದಲ್ಲಿ ಇರುವುದು ಅಸತ್ಯ.

ಕೆಲವು ಸಾವಿರ, ಕೆಲವು ಲಕ್ಷ ವರ್ಷಗಳಿಗೊಮ್ಮೆ ಅಥವಾ ಕೆಲವು ಕೋಟಿ ವರ್ಷಗಳಿಗೊಮ್ಮೆ ಅಪರೂಪವಾಗಿ ಅವಶ್ಯವಿರುವಾಗಲೆ, ದೇವರ ಅಂಶ ಗುರುವಾಗಿ ಭೂಮಿಮೇಲೆ ಬರುತ್ತಿದೆಯೆನ್ನುವುದು, ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆಯ ಮಾತಾಗಿದ್ದು, ಬಂದಿರುವವನು ಸಹ ಗುರುವೆಂದು ತಿಳಿಯದೆ ಇರುವನೆಂದು ಹೇಳುವುದು ನಮ್ಮ ಮಾತಾದರೆ, ಆ ಮಾತುಗಳಿಗೆ ಸರಿಹೋಗುವವನು ಕೃಷ್ಣನೆಂದು ತಿಳಿಯುತ್ತದೆ. ಹಾಗಲ್ಲದೆ ಸೂತ್ರಬದ್ದವು ಅಲ್ಲದೆ, ಶಿಷ್ಯರಿರುವವನನ್ನು ಗುರುವೆನ್ನುವುದು, ಬಹಳ ಮಂದಿ ಶಿಷ್ಯರಿರುವವನನ್ನು ಜಗದ್ಗುರು ಎನ್ನುವುದು ಪೂರ್ತಿ ತಪ್ಪೆಂದು ತಿಳಿಯುತ್ತದೆ. ಶಾಸ್ತ್ರಬದ್ಧವಾಗಿ ಭಾರತದೇಶದಲ್ಲಿ ಐದುಸಾವಿರ ವರ್ಷಗಳ ಪೂರ್ವವು ಬಂದಿರುವ ಕೃಷ್ಣನನ್ನು ಹೊರತುಪಡಿಸಿ, ಇಲ್ಲಿಯವರೆಗು ಗುರುವಾಗಲಿ, ಜಗದ್ಗುರುವಾಗಲಿ ಭಾರತದೇಶ ಭೂಮಿ ಮೇಲೆ ಬರಲಿಲ್ಲ. ಕೆಲವು ಶಿಷ್ಯರು ಅವರ ಗುರುವಿನ ಮೇಲೆ ಅಭಿಮಾನದಿಂದ ನಮ್ಮ ಗುರು ನಿಜವಾದ ಗುರುವೆಂದಾಗಲಿ, ಜಗದ್ಗುರು ವೆಂದಾಗಲಿ ಹೇಳಿಕೊಳ್ಳಬಹುದು. ಆದರೆ ಹೇಳಿಕೊಂಡಷ್ಟು ಮಾತ್ರಕ್ಕೆ ಅವರು ಗುರುಗಳಲ್ಲವಲ್ಲ! ಆದ್ದರಿಂದ ಪಕ್ಕದ ಪುರುಷನನ್ನು ನಂಬಿಕೊಳ್ಳುವುದಕ್ಕಿಂತ, ಸ್ವಂತ ಪುರುಷನನ್ನು ನಂಬಿಕೊಳ್ಳುವುದು ಒಳ್ಳೆಯದೆಂದು ಹಿರಿಯರು ಹೇಳಿದಹಾಗೆ, ಬೋಧನೆಗಳನ್ನು ಹೇಳುವ ಪ್ರತಿಯೊಬ್ಬನನ್ನು ಗುರುವೆಂದುಕೊಳ್ಳದೆ, ನಿಜವಾಗಿ ನಿನಗೆ ಅಧಿಕಾರಿಯಾದ ದೇವರನ್ನು ಗುರುವೆಂದು ಲೆಕ್ಕಿಸಿಕೊಳ್ಳುವುದು ಒಳ್ಳೆಯದು. ಪ್ರಸ್ತುತಕ್ಕೆ ನಿನಗೆ ಗುರು ಇದ್ದರೂ ಫರವಾಗಿಲ್ಲ, ಗುರೂಪದೇಶ ತೆಗೆದುಕೊಂಡರೂ ಪರವಾಗಿಲ್ಲ. ಶಿಷ್ಯರು ಇಲ್ಲದ ಗುರುವನ್ನು ನೋಡಿಕೊ! ಶಿಷ್ಯರನ್ನು ಅನುಸರಿಸಿ ಗುರು ಇರುವುದಿಲ್ಲವೆಂದು, ಹೇಳುವ ಧರ್ಮಗಳನ್ನು ಅನುಸರಿಸಿ ಗುರು ವಿರುತ್ತಾನೆಂದು ತಿಳಿದುಕೊ!



# ಗುರುವಿಗೆ ಮಹತ್ವಗಳಿರುತ್ತವಾ? 

ಮನುಷ್ಯರೆಲ್ಲರೂ ಮೋಸಹೋಗುವುದು ಮಹತ್ವಗಳಿಂದಲೇ. ಮಹತ್ವಗಳನ್ನು ನೋಡಿ ಅದೇ ನಿಜವಾದ ದೈವತ್ವವೆಂದುಕೊಂಡು ಮಾಯೆ ಮಾರ್ಗದಲ್ಲಿ ಹೋಗುವವರು ಬಹಳ ಜನ ಇದ್ದಾರೆ. ಇದರಿಂದ ಮಾಯೆಗೆ ಮಹತ್ವಗಳು ಇವೆಯಾ? ಗುರುವಿಗೆ ಮಹತ್ವಗಳು ಇಲ್ಲವಾ? ಎಂದು ನೀವು ಪ್ರಶ್ನಿಸಬಹುದು. ಅದಕ್ಕೆ ಉತ್ತರವೇನೆಂದರೆ! ಮಾಯೆಗೆ ಮಹತ್ವಗಳಿರುವಾಗ ಮಾಯೆಗಿಂತ ದೊಡ್ಡವನಾದ, ಮಾಯೆಯನ್ನು ಸೃಷ್ಟಿಸಿಟ್ಟವನಿಗೆ ಮಹತ್ವ ಇಲ್ಲದಿರುವುದೆ? ಗುರುವಿಗು ಸಹ ಮಹತ್ವಗಳು ಇವೆಯೆಂದೇ ಹೇಳಬಹುದು. ಪ್ರಪಂಚದಲ್ಲಿ ಗುರುವಿನಿಂದ ಮಹತ್ವ ನಡೆಯುತ್ತದೆ, ಮಾಯೆಯಿಂದ ಮಹತ್ವ ನಡೆಯುತ್ತದೆ. ಆದರೆ ಯಾವುದು ಗುರುವಿನ ಮಹತ್ವ? ಯಾವುದು ಮಾಯೆ ಮಹತ್ವ ಎಂದು ಯಾರಿಗೂ ತಿಳಿಯದಾಗಿದೆ. ಇಲ್ಲಿ ಕೆಲವರಿಗೊಂದು ಪ್ರಶ್ನೆ ಬರಬಹುದು. ಅದೇನೆಂದರೆ! "ಗುರು ಶರೀರದಿಂದ ಪ್ರತ್ಯಕ್ಷವಾಗಿ ಕಾಣಿಸುತ್ತಿದ್ದಾನೆ, ಆದ್ದರಿಂದ ಆತನಿಂದ ನಡೆಯುವ ಮಹತ್ವವನ್ನು ಕಂಡುಕೊಳ್ಳಬಹುದು. ಆದರೆ ಆಕಾರವಿಲ್ಲದ ಮಾಯೆ ತನ್ನ ಮಹತ್ವಗಳನ್ನು ಹೇಗೆ ತೋರಿಸುತ್ತದೆ? ಅದನ್ನು ನೋಡಿ ಮಾಯೆ ಹಿಂದೆ ನಾವು ಹೇಗೆ ಹೋಗುತ್ತೇವೆ" ಎಂದು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ!

ದೇವರ ಶಕ್ತಿಯಲ್ಲಿನ ಭಾಗ ಗುರುವಾಗಿ ಬಂದಾಗ ಮಾತ್ರ ಗುರು ಕಾಣಿಸುತ್ತಾನೆ. ದೇವರ ಸೃಷ್ಠಿಯಲ್ಲಿನ ಭಾಗವಾದ ಮಾಯೆ, ಮನುಷ್ಯನ ಶರೀರದಲ್ಲಿ ತಲೆಯಲ್ಲಿ ಗುಣಗಳ ರೂಪದಲ್ಲಿದೆ. ಈ ವಿಷಯವನ್ನೇ ಭಗವದ್ಗೀತೆಯಲ್ಲಿ ***"ಗುಣಮಯಿ ಮಮ ಮಾಯ"*** ಎಂದು ಭಗವಂತನೇಳಿದ್ದಾನೆ. ನಾನು ತಯಾರು ಮಾಡಿ ಇಟ್ಟಿರುವ ನನ್ನ ಮಾಯೆ, ಗುಣಗಳ ರೂಪದಲ್ಲಿದೆಯೆಂದು ಭಗವಂತನ ಭಾವ. ಅದರ ಪ್ರಕಾರ ಮಾಯೆ ಕಾಣಿಸದ ವಿಧದಲ್ಲಿ, ಎಲ್ಲ ಶರೀರಗಳಲ್ಲಿ ಕೆಲಸ ಮಾಡುತ್ತದೆ. ದೇವರು ಕಾಣಿಸುವ ಮನುಷ್ಯನಾಗಿ ಬಂದು, ಭೂಮಿಮೇಲೆ ಇರುವಾಗ ಅಲ್ಲಿಯವರೆಗೂ ಎಲ್ಲ ಶರೀರಗಳಲ್ಲಿ ಗುಣರೂಪದಲ್ಲಿದ್ದು, ಆ ಶರೀರ ಜೀವಿಗಳನ್ನು ಮಾತ್ರ ತನ್ನಲ್ಲಿಯೇ ಲಗ್ನ ಮಾಡಿದ ಮಾಯೆ, ಕೆಲವು

ಶರೀರ ಜೀವಿಗಳನ್ನು ಗುರುವಿಗೆ ವಿರುದ್ಧವಾಗಿ ನಡೆದುಕೊಳ್ಳುವ ಹಾಗೆ ಮಾಡುವುದು. ಮತ್ತೆ ಕೆಲವು ಶರೀರಗಳಿಂದ ಗುರುವಿಗೆ ವಿರುದ್ಧವಾಗಿ ಬೋಧಿಸುವ ಹಾಗೆ ಮಾಡುವುದು. ಕೆಲವು ಶರೀರಗಳನ್ನು ದೈವಜ್ಞಾನವೆನ್ನುವ ಹೆಸರಿನಿಂದ ತನ್ನ ಮಾಯೆ ಜ್ಞಾನವನ್ನು ಬೋಧಿಸುವ ಹಾಗೆ ಮಾಡಿ, ಗುರುಗಳಾಗಿ ಪ್ರವರ್ತಿಸುವಂತೆ ಮಾಡುವುದು. ಕೆಲವರನ್ನು ಬಾಬಾಗಳಾಗಿ ಪ್ರವರ್ತಿಸುವಂತೆ ಮಾಡಿ, ಅವರಿಂದ ಎಷ್ಟೋ ಮಹತ್ವಗಳನ್ನು ಮಾಡಿಸುತ್ತದೆ. ಬಾಬಾಗಳಿಂದ ಮನುಷ್ಯರು ಕೋರುವ ಕೋರಿಕೆಗಳನ್ನೆಲ್ಲ ನೆರವೇರುವ ಹಾಗೆ ಮಾಡುವುದು. ಹಾಗೆ ಮಾಯೆ ಮೊದಲು ಜಾಗ್ರತೆಯಾಗಿ ದೇವರು ಗುರುವಾಗಿ ಬಾರದಮುನ್ನ, ಕೆಲವು ವರ್ಷಗಳಿಂದಲೆ ಮಾಡುವುದರಿಂದ, ಪ್ರಜೆಗಳೆಲ್ಲರು ಅಲ್ಲಿಯವರೆಗೂ ತಯಾರಾದ ಮಾಯೆ ಗುರುಗಳ ಕೈಯಲ್ಲಿ, ಮಹತ್ವಗಳನ್ನು ಹೊಂದಿರುವ ಮಾಯೆ ಬಾಬಾಗಳ ಕೈಯಲ್ಲಿಯು ಸೇರಿಹೋಗಿರುತ್ತಾರೆ. ಆಗಿರುವುದರಿಂದ ನಿಜ ಗುರುವಿನ ಹತ್ತಿರಕ್ಕೆ ಸೇರುವವರು ಅಪರೂಪವಾಗಿ ಹೋಗುವರು. ಹಾಗೆ ಮಾಯೆ ಎಲ್ಲರ ತಲೆಯಲ್ಲಿದ್ದು ಮನುಷ್ಯರಿಂದಲೆ ತನ್ನ ಗುರುಗಳನ್ನು, ತನ್ನ ಬಾಬಾಗಳನ್ನು ತಯಾರು ಮಾಡಿ ಅಲ್ಲಲ್ಲಿ ಮೊದಲೇ ಪ್ರಚಾರದಲ್ಲಿ ಇರುವಹಾಗೆ ಮಾಡುತ್ತದೆ.

ನಿಜ ಗುರು ಬಂದಾಗ, ಆತನು ಜ್ಞಾನವನ್ನು ಹೇಳುವುದೇ ಅಲ್ಲದೆ ಆ ಜ್ಞಾನಕ್ಕೆ ಕರ್ಮವನ್ನು ಸುಡುವಶಕ್ತಿ ಇದೆಯೆಂದು ತಿಳಿಸುವ ನಿಮಿತ್ತ, ಎಲ್ಲಾದರೂ ಜ್ಞಾನಾಗ್ನಿಯಿಂದ ಒಬ್ಬನ ಕರ್ಮ ಸುಟ್ಟುಹೋಗುವ ಹಾಗೆ ಮಾಡುತ್ತಿದ್ದಾನೆ. ಉದಾಹರಣೆಗೆ ಒಂದು ರೋಗ ಅನುಭವಿಸುವವನಿಗೆ, ಅವನ ಕರ್ಮವನ್ನು ತನ್ನ ಅಗ್ನಿಯಿಂದ ಸುಟ್ಟುಹಾಕಿ ರೋಗವನ್ನು ಇಲ್ಲದೆ ಮಾಡಿದ್ದಾನೆಂದುಕೊಳ್ಳೋಣ. ಅದು ಹೊರಗಡೆ ಮಹತ್ವವಾಗಿಯೇ ಕಾಣಿಸುವುದು. ಜ್ಞಾನದ ಶಕ್ತಿಯನ್ನು ನಿರೂಪಿಸುವ ನಿಮಿತ್ತ, ಕರ್ಮವನ್ನು ಸುಟ್ಟು, ಇಲ್ಲದೆ ಮಾಡುವುದು ಹೊರಗಿನ ಪ್ರಜೆಗಳಿಗೆ ಮಹತ್ವವೇ ಆಗಿರುವಾಗ ಬಹು ಅಪರೂಪವಾಗಿ ಕೆಲವು ಸಂದರ್ಭಗಳಲ್ಲಿ ಗುರು ತನ್ನ ಮಹತ್ವವನ್ನು ಆ ವಿಧದಲ್ಲಿ ತೋರಿಸಬೇಕಾಗಿರುತ್ತದೆ.

ಅದನ್ನು ಗುರು ಮಹತ್ವವೇ ಎನ್ನಬಹುದು. ಮಾಯೆ ಮಾತ್ರ ರೋಗ ಸಂಬಂಧ ಕರ್ಮವನ್ನೇ ಅಲ್ಲದೆ, ಮಾನವನಿಗೆ ಸುಖಗಳು ಕಲ್ಪಿಸುವ ಎಲ್ಲ ಮಹತ್ವಗಳನ್ನು ಬಾಬಾಗಳಿಂದ ನೆರವೇರುವ ಹಾಗೆ ಮಾಡಿಸುತ್ತದೆ. ಅಂತಹ ಮಹತ್ವಗಳ ಅಮಲಿನಲ್ಲಿ ಮುಳಿಗಿರುವ ಮನುಷ್ಯ ಇದಕ್ಕಿಂತ ಕಷ್ಟಗಳು ತೀರಿಸುವ ದೇವರು ಇಲ್ಲವೆಂದು ಆತನನ್ನೇ ಪ್ರತ್ಯಕ್ಷ ದೈವವೆನ್ನುತ್ತಾ ನಿಜ ಗುರುವಿನ ಕಡೆಗೂ ಸಹ ನೋಡುವುದಿಲ್ಲ. ಅಂತಹವರ ಹತ್ತಿರ ಯಾರಾದರೂ ಗುರು ಪ್ರಸ್ಥಾವನೆ ತಂದು ಜ್ಞಾನವನ್ನು ಚೆನ್ನಾಗಿ ಹೇಳುತ್ತಿದ್ದಾನೆಂದರೆ, ಅವರ ಮಾತನ್ನು ಕೇಳದೆ ಬಾಬಾಗಿಂತ ಮೀರಿದ ಗುರುವಿಲ್ಲವೆನ್ನುವರು. ಈ ವಿಧದಲ್ಲಿ ಮಾಯೆ ತನ್ನ ಮನುಷ್ಯರಿಂದ ನಿಜ ಗುರುವಿಗೆ ವಿರುದ್ಧವಾಗಿ, ಗುರುಗಳನ್ನು, ಬಾಬಾಗಳನ್ನು, ಸ್ವಾಮಿಗಳನ್ನು ತಯಾರು ಮಾಡುವುದೇ ಅಲ್ಲದೆ, ಗುರು ಮಹತ್ವಕ್ಕಿಂತ ತನ್ನ ಮಹತ್ವವನ್ನೇ ದೊಡ್ಡದೆನ್ನಿಸಿ, ಮನುಷ್ಯರನ್ನು ತನ್ನ ಕಡೆ ಎಳೆದುಕೊಳ್ಳುತ್ತದೆ. ಗುರುವಿಗೆ ಮಹತ್ವವಿದ್ದರೂ ಮಾಯೆಗಿರುವ ಮಹತ್ವವಿದ್ದಹಾಗೆ ಇರುವುದಿಲ್ಲ.



# ಗುರುವಿಗೆ ರೋಗಗಳು ಬರುತ್ತವೆಯಾ?

ಹೋದ ಜನ್ಮದಲ್ಲಿ ಮಾಡಿಕೊಂಡಿರುವ ಪಾಪಗಳು ರೋಗಗಳಾಗಿ ಬರುತ್ತವೆಂದು, ರೋಗಗಳ ನೋವನ್ನು ಅನುಭವಿಸಿದಾಗಲೇ ಪಾಪ ಮುಗಿದು ಹೋಗುವುದೆಂದು ಜ್ಞಾನದ ಪ್ರಕಾರ ತಿಳಿದುಕೊಂಡಿದ್ದೇವೆ. ಒಂದು ಸಾಧಾರಣ ಜೀವಾತ್ಮನಿಗೆ ಗತಜನ್ಮ ಇರುತ್ತದೆ, ಆ ಜನ್ಮದಲ್ಲಿ ಪಾಪ ಮಾಡಿರುತ್ತಾನೆ. ಆ ಜೀವಾತ್ಮ ಹುಟ್ಟಿ ರೋಗರೂಪದಲ್ಲಿ ಪಾಪವನ್ನು ಅನುಭವಿಸಿದ್ದಾನೆಂದರೆ ಸರಿಹೋಗುತ್ತದೆ. ಆದರೆ ಗುರುವಿಗೆ ಹಿಂದಿನ ಜನ್ಮವಿಲ್ಲ, ಮತ್ತು ಒಂದು ಕಡೆ ಮರಣಿಸಿ, ಮತ್ತೊಂದು ಕಡೆ ಹುಟ್ಟಿದವನೂ ಅಲ್ಲ. ಆತನಿಗೆ ಕರ್ಮವಂತೂ ಇಲ್ಲವೇ ಇಲ್ಲ. ಆದರೂ ಗುರುವಿಗೆ ರೋಗಗಳು ಬರುವುದು ವಾಸ್ತವವೇ. ಯಾರಾದರು ಒಂದು ನೋವನ್ನು ಅನುಭವಿಸಬೇಕೆಂದರೆ, ಅದರ ಹಿಂದೆ

ಒಂದು ತತಂಗವಿರಬೇಕು. ಒಂದು ನೋವನ್ನೇ ಅಲ್ಲ, ಯಾವ ಚಿಕ್ಕ ಕೆಲಸ ನಡೆಯಬೇಕೆಂದರೂ ಅದಕ್ಕೆ ಸಂಬಂಧಿಸಿದ ಕರ್ಮ ಎನ್ನುವ ವಿಧಾನವಿರಬೇಕು. ಪ್ರತಿ ಚಿಕ್ಕ ಚಲನೆಗೂ ಸಂಬಂಧಿಸಿದ ಸಮಾಚಾರ, ಕಾರಣವು ಮೊದಲೇ ನಿರ್ಣಯಿಸಿರುತ್ತದೆ. ಹಾಗೆ ಬರೆದು ಇಟ್ಟಿರುವುದನ್ನೇ ಕರ್ಮ ಅನ್ನುತ್ತೇವೆ. ಯಾರಿಗಾದರೂ ಕರ್ಮ ಇದೆ ಎಂದರೆ ಅದು ಅವನು ಹಿಂದಿನ ಜನ್ಮಗಳಲ್ಲಿ ಮಾಡಿಕೊಂಡಿರುವುದೆ ಎಂದು ಬ್ರಹ್ಮವಿದ್ಯಾ ಶಾಸ್ತ್ರವು ತಿಳಿಸುತ್ತದೆ. ಇಲ್ಲಿ ಗುರುವಿಗಂತೂ ಹಿಂದಿನ ಜನ್ಮ ಇಲ್ಲವೇ ಇಲ್ಲ. ಆದರೆ ಆತನು ಭೂಮಿಮೇಲೆ ಸಂಚರಿಸಿ, ಮಾತನಾಡಿ, ಎಷ್ಟೋ ಮಾಡುವುದಕ್ಕೆ ಬೇಕಾಗಿರುವ ವಿಧಾನ ಮೊದಲೇ ಬರೆದಿಟ್ಟಿರುವುದು ಇರುವುದಿಲ್ಲವಲ್ಲವೆ! ಹಾಗಿರುವಾಗ ಗುರು ಅನ್ನುವ ಮನುಷ್ಯ ಹೇಗೆ ಯಾವ ವಿಧಾನದ ಪ್ರಕಾರ ಸಂಚರಿಸುತ್ತಾನೆಂದು ಯಾರಿಗಾದರೂ ಪ್ರಶ್ನೆ ಬರಬಹುದು. ಅದಕ್ಕೆ ಉತ್ತರ ಏನೆಂದರೆ! ಗುರುವಿಗೆ ಹಿಂದಿನ ಜನ್ಮವಿಲ್ಲ, ಅದರ ಪ್ರಕಾರ ಆತನಿಗೆ ಕರ್ಮವಿಲ್ಲ. ಆದರೆ ಕರ್ಮ ಎನ್ನುವ ವಿಧಿ ವಿಧಾನದ ಪ್ರಕಾರವೇ ಆತನು ಸಹ ಸಂಚರಿಸುವುದು, ಅನುಭವಿಸುವುದು ನಡೆಯುತ್ತದೆ. ಹಿಂದಿನ ಜನ್ಮವಿಲ್ಲ, ಹಿಂದಿನ ಕರ್ಮವಿಲ್ಲ, ಆದರೆ ಈಗ ಆತನು ನಡೆದು ಕೊಳ್ಳುವುದಕ್ಕೆ ಅವಶ್ಯವಾದ ವಿಧಿವಿಧಾನ ಎಲ್ಲಿಯದು? ಎಂದು ಪ್ರಶ್ನಿಸಿಕೊಂಡರೆ, ದೇವರು ತನ್ನ ಶಕ್ತಿಯಲ್ಲಿನ ಭಾಗವನ್ನು ಭೂಮಿಮೇಲೆ ಗುರುವಾಗಿ ಸಂಚರಿಸುವಂತೆ ಮಾಡಬೇಕಾಗಿ ಬಂದಾಗ, ದೇವರೆ ಗುರು ಆಕಾರಕ್ಕೆ ಬೇಕಾದ ಕರ್ಮ ವಿಧಾನವನ್ನು ತಯಾರು ಮಾಡಿ, ಗುರು ಶರೀರ ಕರ್ಮಚಕ್ರದಲ್ಲಿ ಬರೆದು ಕಳುಹಿಸುವನು, ಹಾಗೆ ದೇವರು ತನ್ನ ಕರ್ಮವನ್ನು ತಾನೇ ಬರೆದು ಕೊಂಡು ಗುರುವಾಗಿ ಅವತರಿಸುತ್ತಾನೆ. ಆತನಿಗಾಗಿ ಆತನು ಬರೆದುಕೊಂಡ ಕರ್ಮ, ತನ್ನನ್ನು ಯಾರೂ ಗುರುತಿಸದ ಹಾಗೆ, ಎಲ್ಲರಹಾಗೆ ಎಲ್ಲ ನೋವುಗಳನ್ನು ಅನುಭವಿಸುವ ಹಾಗೆ, ತನಗೆ ಹೇಗೆ ಇಷ್ಟವಾದರೆ ಹಾಗೆ ನಿರ್ಣಯಿಸಿಕೊಂಡು ಬಂದಿರುವನು. ಆ ನಿರ್ಣಯವನ್ನು, ಎಂದರೆ ಆ ಕರ್ಮ ವಿಧಾನವನ್ನು

ಯಾವ ಜ್ಯೋತಿಷ್ಯವು ಗುರುತಿಸುವುದಿಲ್ಲ. ಮಾನವನ ಕರ್ಮವನ್ನು ಜಾತಕದ ಪ್ರಕಾರ ಜ್ಯೋತಿಷ್ಯ ಶಾಸ್ತ್ರದಿಂದ ಸ್ವಲ್ಪಕ್ಕೆ ಸ್ವಲ್ಪವಾದರೂ ಗುರುತಿಸಬಹುದು. ಆದರೆ ಜಾತಕವೇ ಇಲ್ಲದ ಗುರುವಿಗೆ ಜ್ಯೋತಿಷ್ಯವು ಕರ್ಮವನ್ನು ಕಂಡುಕೊಳ್ಳುವುದಿಲ್ಲ. ಜಾತಕವಿರುವವನಿಗೆ ಇಂತಹ ಲಗ್ನವೆಂದು ಹೇಳಬಹುದು. ಜಾತಕವೇ ಇಲ್ಲದವನಿಗೆ ಲಗ್ನವಿಲ್ಲ. ಲಗ್ನವೇ ಇಲ್ಲದಿರುವಾಗ ಜ್ಯೋತಿಷ್ಯವನ್ನು ನೋಡಲಾರೆವು. ಆದ್ದರಿಂದ ಗುರುವು ಯಾವಾಗ ಹೇಗೆ ಪ್ರವರ್ತಿಸುವನೊ ಹೇಳಲಾರೆವು.

ಸಾಧಾರಣ ಮನುಷ್ಯನಿಗೆ ರೋಗ ಬರುವಹಾಗೆ, ಗುರುವಿಗೂ ಸಹ ರೋಗ ಬರುವುದು, ಅನುಭವಿಸುವುದು ಎಲ್ಲ ನಡೆಯುತ್ತದೆ. ಪ್ರತಿ ನೋವನ್ನು, ಪ್ರತಿ ರೋಗವನ್ನು, ಪ್ರತಿ ಸಂಘಟನೆಯನ್ನು, ಪ್ರತಿ ಕದಲಿಕೆಯನ್ನು ಆತನು ನಿರ್ಣಯಿಸಿಕೊಂಡು ಬಂದಿರುವವೆಯೆಂದು ಯಾರಿಗೂ ತಿಳಿಯದು. ನೋಡುವವರಿಗೆಲ್ಲ ಸಾಧಾರಣ ಮನುಷ್ಯನಾಗಿ ಕಾಣಿಸುವವನು ತನ್ನ ಕರ್ಮವನ್ನು ತಾನೇ ನಿರ್ಣಯಿಸಿಕೊಂಡು ಬಂದಿದ್ದಾನೆಂದು ಇತರರು ಹೇಗೆ ಅಂದುಕೊಳ್ಳುತ್ತಾರೆ? ಆತನು ಗುರು ಎನ್ನುವ ವಿಷಯವೇ ಯಾರಿಗೂ ತಿಳಿಯದಿರುವಾಗ, ಆತನು ಸ್ವತಃವಾಗಿ ಹುಟ್ಟಿದ "ಸ್ವಯಂಭೂ" ಎಂದು ತಿಳಿಯದಿರುವಾಗ, ಆತನ ಕರ್ಮ ವಿಷಯ ಯಾರಿಗೂ ತಿಳಿದಿಲ್ಲ. ಸರ್ವಸಾಧಾರಣ ಮನುಷ್ಯ ಯಾವ ವಿಧದಲ್ಲಿ ಕರ್ಮಗಳನ್ನನುಭವಿಸುತ್ತಾನೊ, ಯಾವ ವಿಧದಲ್ಲಿ ರೋಗಗಳನ್ನು ಅನುಭವಿಸುತ್ತಿದ್ದಾನೊ, ಯಾವ ವಿಧವಾಗಿ ಪ್ರವರ್ತಿಸುತ್ತಿದ್ದಾನೊ, ಆ ವಿಧದಲ್ಲಿ ಗುರುತಿಸದ ಹಾಗೆ ಗುರು ಭೂಮಿಮೇಲೆ ಕರ್ಮಗಳನ್ನು ಅನುಭವಿಸುತ್ತಿದ್ದಾನೆ. ಅನುಭವಿಸುವ ಕರ್ಮಗಳನ್ನು ಅನುಸರಿಸಿಯಾಗಲಿ, ಆಚರಿಸುವ ಕೆಲಸಗಳನ್ನು ಅನುಸರಿಸಿಯಾಗಲಿ ಈತನು ಗುರುವೆಂದು ಯಾರೂ ನಿರ್ಣಯಿಸಿ ಹೇಳಲಾರರು.



# 58 ಗುರುವನ್ನು ಯಾರೂ ಗುರುತಿಸುವುದಿಲ್ಲವೆ?

ಒಂದು ವಿಧವಾಗಿ ಗುರುವನ್ನು ಸರ್ವಸಾಧಾರಣವಾಗಿ ಯಾರೂ ಗುರುತಿಸುವುದಿಲ್ಲವೆಂದೇ ಹೇಳಬೇಕು. ಇನ್ನೊಂದು ವಿಧಾನದ ಪ್ರಕಾರ ಗುರುತಿಸಬಹುದೇನೊ ಎಂದು ಸಹ ಹೇಳಬೇಕು. ಗುರುವನ್ನು ಗುರುತಿಸುವುದಕ್ಕೆ ಇರುವ ಪ್ರತ್ಯೇಕ ವಿಧಾನವೇನೊ ನನಗೂ ಸಹ ಸರಿಯಾಗಿ ತಿಳಿದಿಲ್ಲ. ಆದರೆ ಆತನನ್ನು ಗುರುತಿಸುವುದಕ್ಕೆ ಯಾವುದೊ ಒಂದು ವಿಧಾನವಂತೂ ಒಂದಿದೆ ಯೆಂದು ಹೇಳಬಲ್ಲೆವು. ಏಕೆಂದರೆ ಗುರುವಿನ ಸ್ಥಾನದಲ್ಲಿ ಕೃಷ್ಣನು ಭೂಮಿಮೇಲೆ ಪ್ರತ್ಯಕ್ಷವಾಗಿ ಇದ್ದಾಗ, ಯಾರೂ ಆತನನ್ನು ಗುರುತಿಸದೆ ಹೋದರೂ ಒಬ್ಬ ಭೀಷ್ಮನು ಮಾತ್ರ ಗುರುತಿಸಿದ್ದಾನೆ. ಅದೇ ವಿಧದಲ್ಲಿ ಕೃಷ್ಣನು ಭೂಮಿಮೇಲೆ ಇಲ್ಲದೆ ಹೋದ ನಂತರ, ಉತ್ತರಪ್ರದೇಶದಲ್ಲಿ ಜನ್ಮಿಸಿದ ಮೀರಾಬಾಯಿ, ಆತನು ಇಂತಹವನೆ ಎಂದು ಸತ್ಯವನ್ನು ಗುರುತಿಸಿದ್ದಾಳೆ. ಕೃಷ್ಣನು ಪ್ರತ್ಯಕ್ಷವಾಗಿರುವಾಗ ಭೀಷ್ಮನು, ಪರೋಕ್ಷವಾಗಿದ್ದಾಗ ಮೀರಾಬಾಯಿ ಗುರುತಿಸಿದ್ದಾರೆಂದರೆ ಗುರುವನ್ನು ಗುರುತಿಸುವುದಕ್ಕೆ ಯಾವುದೋ ಒಂದು ದಾರಿ ಇದೆಯೆಂದು ತಿಳಿಯುತ್ತದೆ. ಅವರಿಗೆ ತಿಳಿದ ದಾರಿ ಯಾವುದೋ ನಮಗೆ ತಿಳಿದಿಲ್ಲ. ಆದರೆ ಗುರು ಹೇಳಿದ ಜ್ಞಾನವನ್ನು ಅನುಸರಿಸಿ, ಅದರಲ್ಲಿನ ಧರ್ಮಗಳನ್ನು ಅನುಸರಿಸಿ ಇಂತಹ ಧರ್ಮವನ್ನೂ, ಜ್ಞಾನವನ್ನೂ ಗುರು ಅಲ್ಲದೆ ಯಾರು ಹೇಳುವುದಿಲ್ಲವೆಂದು ಗ್ರಹಿಸುವುದಕ್ಕೆ ಅವಕಾಶವಿದೆ. ಆದರೆ ಇಲ್ಲಿ ಬಂದಿರುವ ಸಿಕ್ಕೆಲ್ಲಾ, ಆತನು ಹೇಳಿದ ಜ್ಞಾನವನ್ನು ನಾವು ಗುರುತಿಸಬಹುದಾ ಎನ್ನುವದು ಪ್ರಶ್ನೆ. ಆತನು ಭೂಮಿ ಮೇಲೆ ಬರುವುದಕ್ಕಿಂತ ಮೊದಲೆ, ನೂರುವರ್ಷಗಳಿಂದ ಮಾಯೆ ತನ್ನ ಗುರುಗಳನ್ನೂ, ಸ್ವಾಮಿಗಳನ್ನೂ, ಬಾಬಾಗಳನ್ನು ಪ್ರವೇಶವಿಟ್ಟು ಅವರನ್ನು ದಾಟಿ ಪ್ರಜೆಗಳು ಬಾರದಂತೆ ಮಾಡಿದೆ. ಎಷ್ಟೋ ಜನರಿಗೆ ಮೊದಲೆ ಹೆಸರುಹೊಂದಿರುವ ಸ್ವಾಮೀಜಿಗಳು ಹೇಳಿದ ಬೋಧನೆಗಳು ರುಚಿಸಿರುವಾಗ, ಗುರು ಹೇಳುವ ಪ್ರತಿ ಬೋಧನೆ ವಿರುದ್ಧವಾಗಿ ಕಾಣಿಸುತ್ತಿರುತ್ತದೆ. ಹೆಸರುಗಳಿಸಿದ ಸ್ವಾಮೀಜಿಗಳು ಹೇಳಿದ ಬೋಧನೆಯನ್ನು ಬಿಟ್ಟು, ಹೆಸರಿಲ್ಲದವನು ಹೇಳುವ ಬೋಧನೆಯನ್ನು, ಅದೂ ಎಲ್ಲದಕ್ಕು ವಿರುದ್ಧವಾಗಿ ಕಾಣಿಸುವ ಬೋಧನೆಯನ್ನು

ಯಾರು ಆಶ್ರಯಿಸುವರು? ಆತನ ಬೋಧನೆ ಅರ್ಥವಾಗದಿರುವಾಗ ಆತನ ಧರ್ಮಗಳನ್ನು ಹೇಗೆ ಗುರುತಿಸುವರು? ನಂತರ ಆತನ ಧರ್ಮಗಳನ್ನನುಸರಿಸಿ ಆತನನ್ನು ಹೇಗೆ ಗುರುತಿಸಬಲ್ಲರು? ಶಾಸ್ತ್ರಬದ್ಧವಾದ ಜ್ಞಾನ, ಧರ್ಮ ತಿಳಿಯದಿರುವಾಗ ಗುರುವನ್ನು ಅವುಗಳಿಂದ ಗುರುತಿಸುವುದು ಕಷ್ಟವೇ ಆಗುತ್ತದೆ. ಆದರೆ ನಮಗೆ ಕಾಣಿಸುವ ಮಾರ್ಗ ಆತನು ಬೋಧಿಸಿದ ಧರ್ಮಗಳೆಂದೇ ತಿಳಿಯುತ್ತದೆ. ಆದರೆ ಆ ದಿನದ ಭೀಷ್ಮನಾಗಲಿ, ನಿನ್ನೆಯ ಮೀರಾಬಾಯಿ ಆಗಲಿ ಆತನು ಹೇಳಿದ ಜ್ಞಾನ ಧರ್ಮಗಳನ್ನು ಆಧಾರ ಮಾಡಿಕೊಂಡು ಕೃಷ್ಣನು ಇಂತಹವನೆ ಎಂದು ಗುರುತಿಸಲಿಲ್ಲ. ಕೃಷ್ಣನು ಹೇಳಿದ ಧರ್ಮಗಳು, ದ್ವಾಪರಯುಗದಲ್ಲಿನ ಭೀಷ್ಮನಿಗಾಗಲಿ, ಕಲಿಯುಗದಲ್ಲಿನ ಮೀರಾಬಾಯಿಗಾಗಲಿ ತಿಳಿದಿಲ್ಲ. ಕೃಷ್ಣನು ಗೀತೆಯನ್ನು ಯುದ್ಧರಂಗದಲ್ಲಿ ಹೇಳಿದ್ದಾನೆ. ಆಗ ಶತ್ರು ಸೈನ್ಯಾಧಿಪತಿಯಾಗಿ ಭೀಷ್ಮನಿದ್ದಾನೆ. ಗೀತೆಯನ್ನು ಹೇಳಿದ ಬಹುಶ ಎಂಟನೆಯ ದಿನವೆ ಭೀಷ್ಮನು ಯುದ್ಧರಂಗದಲ್ಲಿ ಕೆಳಗೆಬಿದ್ದುಹೋಗಿದ್ದಾನೆ. ಕೃಷ್ಣನು ಗೀತಾ ಜ್ಞಾನ ಹೇಳಿದ ವಿಷಯವು ಸಹ ಭೀಷ್ಮನಿಗೆ ತಿಳಿದಿಲ್ಲ. ಆದ್ದರಿಂದ ಕೃಷ್ಣನು ಹೇಳಿದ ಜ್ಞಾನವಾಗಲಿ, ಧರ್ಮವಾಗಲಿ ಭೀಷ್ಮನಿಗೆ ತಿಳಿದಿರಲಿಲ್ಲವೆಂದೇ ಹೇಳಬೇಕು. ಹಾಗೆ ಮೀರಾಬಾಯಿ ವಿಷಯಕ್ಕೆ ಬಂದರೆ, ಆಕೆ ಕೃಷ್ಣನು ಹೇಳಿದ ಗೀತೆಯನ್ನೇ ನೋಡಿದ ಹಾಗಿಲ್ಲ. ಆದ್ದರಿಂದ ಆಕೆಗು ಸಹ ಆತನು ತಿಳಿಸಿದ ಧರ್ಮಗಳಾವುವೂ ತಿಳಿದಿಲ್ಲ. ಆದ್ದರಿಂದ ಅತ್ತ ಭೀಷ್ಮನಾಗಲಿ, ಇತ್ತ ಮೀರಾಬಾಯಿಯಾಗಲಿ ಗುರುವಿನ ಜ್ಞಾನವನ್ನನುಸರಿಸಿ ಆತನನ್ನು ಗುರುತಿಸಿದ ಹಾಗೆ ಹೇಳುವುದಕ್ಕೆ ಅವಕಾಶವಿಲ್ಲ. ಅವರು ಗುರ್ತಿಸಿದ ವಿಧಾನ ಯಾವುದೊ ಪ್ರತ್ಯೇಕವಾಗಿ ಇದ್ದೇ ಇರಬೇಕು. ಅದು ನಮಗೆ ಅರ್ಥವಾಗಿಲ್ಲವಾದ್ದರಿಂದ ನಮಗೆ ಆ ವಿಧಾನ ಯಾವುದೊ ತಿಳಿಯದೆಂದೇ ಹೇಳಬೇಕು.



# ಗುರು ಎಲ್ಲರ ಹಾಗೆ ಮರಣಿಸುವನಾ?

ಶರೀರವನ್ನು ಧರಿಸಿದವನು ಪುನಃ ಅದನ್ನು ಬಿಡಬೇಕಾಗಿರುವುದೆನ್ನುವುದು ಸೂತ್ರ. ಶರೀರವನ್ನು ಧರಿಸಿರುವುದು ಸಾಧಾರಣ ಜೀವಾತ್ಮ ಆಗಬಹುದು ಅಥವಾ ದೈವವಾದ ಗುರುವಾದರೂ ಆಗಬಹುದು. ಯಾರಾದರು ಸೂತ್ರದ ಪ್ರಕಾರ ಶರೀರವನ್ನು ಬಿಟ್ಟು ಹೋಗಬೇಕಾದದ್ದೆ. ಆದ್ದರಿಂದ ಗುರು ಸಹ ಎಲ್ಲರಹಾಗೆ ಶರೀರವನ್ನು ಬಿಟ್ಟು ಹೋಗುವನು. "ಜಾತಸ್ಯ ಧೃವಂ ಮೃತ್ಯು" ಎನ್ನುವ ಗೀತಾ ವಾಕ್ಯದ ಪ್ರಕಾರ ಹುಟ್ಟಿದವನು ಮರಣಿಸಲೇಬೇಕು. ಆದರೆ ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ ಮರಣಗಳ ವಿವರವನ್ನು ನೋಡಿದರೆ ಎಲ್ಲರಿಗೂ ಸಾವು ತಪ್ಪದೆ ಇರುವುದು. ಆದರೂ ಮರಣಗಳಲ್ಲಿ ಮೋಕ್ಷ ಹೊಂದುವವು, ಮೋಕ್ಷ ಹೊಂದದಿರುವವು ಎರಡು ವಿಧಗಳು ಇವೆ. ಅಷ್ಟೇ ಅಲ್ಲದೆ ಸಾಧಾರಣ ಮನುಷ್ಯರ ಮರಣ ಬೇರೆ, ಯೋಗಿಗಳ ಮರಣ ಬೇರೆಯಾಗಿವೆ. ಈಗ ಗುರು ಮರಣವನ್ನು, ಸಾಧಾರಣ ಮನುಷ್ಯರ ಮರಣದೊಳಗೆ ಸೇರಿಸಬೇಕಾ ಅಥವಾ ಯೋಗಿಗಳ ಮರಣದೊಳಗೆ ಸೇರಿಸಬೇಕಾ ಎನ್ನುವ ಸಂಶಯ ಬರಬಹುದು. ಗುರು ಸಾಧಾರಣ ಮನುಷ್ಯನ ಹಾಗೆ ನಟಿಸಿದರೂ, ಆತನು ನಮಗೆ ತಿಳಿದರೂ ತಿಳಿಯದಿದ್ದರೂ ನಿಜವಾದ ಯೋಗಿ. ಹಾಗೆಂದು ಸಾಧಾರಣ ಯೋಗಿ ಸಹ ಅಲ್ಲ ಯೋಗೀಶ್ವರನು ಅಂಥವನನ್ನು ಎರಡು ವಿಧಗಳ ಮರಣಗಳಲ್ಲಿ ಯೋಗಿಗಳ ಮರಣದೊಳಗೆ ಲೆಕ್ಕಿಸಬೇಕು.

ಬ್ರಹ್ಮವಿದ್ಯಾ ಶಾಸ್ತ್ರವಾದ ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ ಯೋಗಿಗಳ ಮರಣದಲ್ಲಿಯೂ ಸಹ ವಿಶ್ಲೇಷಣೆ ಇದೆ. ಯೋಗಿಗಳು ಯಾವ ಸಮಯದಲ್ಲಿ ಸತ್ತುಹೋದರೆ ಮೋಕ್ಷವನ್ನು ಹೊಂದುವರೊ, ಯಾವ ಸಮಯದಲ್ಲಿ ಸತ್ತುಹೋದರೆ ಮೋಕ್ಷವನ್ನು ಹೊಂದುವುದಿಲ್ಲವೊ, ಆ ವಿಶ್ಲೇಷಣೆಯಲ್ಲಿ ಇದೆ. ಗುರು ಮರಣವನ್ನು ಯೋಗಿಗಳ ಮರಣದೊಳಗೆ ಲೆಕ್ಕಿಸಿ ನೋಡಿದರೂ, ಆ ಯೋಗಿಗಳ ಮರಣದಲ್ಲಿ ಮೋಕ್ಷ ಹೊಂದುವುದಾ, ಮೋಕ್ಷ ಹೊಂದದಿರುವುದಾ ಎಂದು ಸಹ ನೊಡಬೇಕಾಗಿರುತ್ತದೆ. ಯೋಗಿಗಳ

ಎರಡು ವಿಧಗಳ ಮರಣಗಳೆನ್ನುವವು ಯಾವುವು? ಎಂದು ನೋಡಿದರೆ ಅವು ಮರಣಿಸುವ ಸಮಯವನ್ನು ಅನುಸರಿಸಿ ವಿಭಜಿಸಲ್ಪಟ್ಟಿರುತ್ತವೆಂದು ತಿಳಿಯುತ್ತದೆ. ಒಂದು ಯೋಗಿ ಮೋಕ್ಷವನ್ನು ಹೊಂದುವ ಮರಣ ಹಗಲು, ಶುಕ್ಲಪಕ್ಷ, ಉತ್ತರಾಯಣದಲ್ಲಿರುವುದು, ಎರಡನೆಯದು ಯೋಗಿ ಮೋಕ್ಷ ಹೊಂದದ ಮರಣವು ರಾತ್ರಿ ಕೃಷ್ಣಪಕ್ಷ, ದಕ್ಷಿಣಾಯಣದಲ್ಲಿರುವುದು. ಇದರ ಪ್ರಕಾರ ಸಮಸ್ತ ಯೋಗಿಗಳ ಮರಣವನ್ನು ಲೆಕ್ಕಿಸಿ ನೋಡಬೇಕಾಗಿರುವುದು. ಆದರೆ ಇಲ್ಲಿ ಗುರು ಯೋಗಿಯೇ ಆದರೂ ಆತನು ಎಲ್ಲರೂ ಮರಣಿಸಿದ ಹಾಗೆ ಮರಣಿಸಿದರೆ ಅಲ್ಲವೆ ನಾವು ಆತನ ಮರಣವನ್ನು ವಿಶ್ಲೇಷಿಸಿ ನೋಡಬಹುದು. ಗುರು ಶರೀರವನ್ನು ಧರಿಸಿ ಹುಟ್ಟಿದ ದಿನ ಸಹ ತಾಯಿಗರ್ಭದಿಂದಲೆ ಚೈತನ್ಯದಿಂದ ಹುಟ್ಟಿ ಭಗವಂತನು ಅನಿಸಿಕೊಂಡಿದ್ದಾನೆ. ಹಾಗೆ ಶರೀರವನ್ನು ಬಿಟ್ಟು ಮರಣಹೊಂದಿದ ದಿನ ಸಹ ಪ್ರತ್ಯೇಕತೆ ಹೊಂದಿರುತ್ತಾನೆ. ಆ ಪ್ರತ್ಯೇಕತೆ ಏನೆಂದರೆ! ಗುರು (ದೇವರು) ವಿಗೆ ಹುಟ್ಟು ಇಲ್ಲ ಮತ್ತು ಸಾವು ಇಲ್ಲ. ಸಾವುಹುಟ್ಟುಗಳು ಇಲ್ಲದವನು ಗುರು. ಆದರೆ ಸಾವು ಹುಟ್ಟುಗಳಿದ್ದ ಹಾಗೆ ನಟಿಸುತ್ತಿರುವನು. ಗುರುವು ಶರೀರವನ್ನು ಧರಿಸಿ ಹುಟ್ಟಿದಾಗ ಯಾರೂ ಹುಟ್ಟದ ಹಾಗೆ ಚೈತನ್ಯದಿಂದ ಹುಟ್ಟಿದ್ದಾನೆ. ಹಾಗೆ ಶರೀರ ಬಿಟ್ಟು ಹೋಗುವಾಗ ಶರೀರವನ್ನು ಬಿಟ್ಟು ಹೊರಗೆ ಹೋಗದೆ, ಶರೀರದೊಳಗೆ ಅಡಗಿ ಹೋಗಿದ್ದಾನೆ. ಶರೀರದೊಳಗೆ ಅಡಗಿ ಹೋದ ಗುರುವು ವಿಶ್ವವ್ಯಾಪಿಯಾಗಿ ಹೋಗಿದ್ದಾನೆ.

ಕರ್ಮ ಶೇಷವಿಲ್ಲದೆ ಮುಗಿದುಹೋದ ಯೋಗಿ ಮರಣಿಸಿದರೆ ಹಗಲು, ಶುಕ್ಲಪಕ್ಷ, ಉತ್ತರಾಯಣ ಕಾಲದಲ್ಲಿ ಮರಣಿಸುವನೆಂದುಕೊಂಡಿದ್ದೇವೆ ಅಲ್ಲವೆ! ಹಾಗೆ ಮರಣಿಸುವ ಸಮಯದಲ್ಲಿ ಯೋಗಿ ಶರೀರದಲ್ಲಿನ ಜೀವಾತ್ಮನು ಮೊದಲು ಆತ್ಮದಲ್ಲಿ ಸೇರಿ ಆತ್ಮವಾಗಿ ಬದಲಾಗುವನು. ಹಾಗೆ ಜೀವಾತ್ಮ ಸೇರಿಕೊಂಡ ಆತ್ಮ ಶರೀರದಲ್ಲಿಯೇ ಇರುವ ಪರಮಾತ್ಮನೊಳಗೆ ಐಕ್ಯವಾಗಿ ಹೋಗುವನು. ಈ ವಿಧದಲ್ಲಿ ಮೋಕ್ಷವನ್ನು (ದೈವವನ್ನು) ಹೊಂದುವ ಯೋಗಿ ಶರೀರದಲ್ಲಿ

ನಡೆಯುವ ವಿಧಾನವಿದೆ. (ನಮ್ಮ ರಚನೆಗಳಲ್ಲಿನ **"ಜನನ ಮರಣ ಸಿದ್ಧಾಂತ"** ದಲ್ಲಿ ಪೂರ್ತಿಯಾಗಿ ವಿವರಿಸಲಾಗಿದೆ) ಆದರೆ ಗುರು ಮರಣಿಸಿದರೆ ಅದು ಯೋಗಿಗಳ ಮರಣದ ರೀತಿಯಲ್ಲಿಯು ಸಹ ಇರುವುದಿಲ್ಲ. ಜೀವಾತ್ಮ ಆತ್ಮದೊಳಗೆ, ಆತ್ಮ ಪರಮಾತ್ಮದೊಳಗೆ ಸೇರಿ ಹೋಗುವುದಂತೂ ಗುರು ಶರೀರದಲ್ಲಿ ನಡೆಯುವುದಿಲ್ಲ. ಆತನು ಮೊದಲಿಗೇ ಜೀವಾತ್ಮ ಅಲ್ಲ, ಆತ್ಮನು ಅಲ್ಲ. ಗುರು ಶರೀರದಲ್ಲಿ, ಯೋಗಿ ಶರೀರದಲ್ಲಿದ್ದ ಹಾಗೆ ಜೀವಾತ್ಮ ಇಲ್ಲ, ಆತ್ಮ ಇಲ್ಲ. **ಗುರು ಸಾಕ್ಷಾತ್ತು ಪರಬ್ರಹ್ಮ** ಆಗಿರುವುದರಿಂದ ಗುರು ಮರಣವನ್ನು ಯೋಗಿಗಳ ಮರಣದಲ್ಲಿ ನೋಡಿದಹಾಗೆ ಈತನು ದೇವರಲ್ಲಿ ಐಕ್ಯವಾಗಿದ್ದಾನಾ ಇಲ್ಲವಾ ಎಂದು ನೋಡಬೇಕಾದ ಕೆಲಸವೇ ಇಲ್ಲ. ಆದ್ದರಿಂದ ಯೋಗಿಗಳ ಮರಣದಲ್ಲಿ ನೋಡಬೇಕಾದ ಕಾಲ ಗುರುವಿಗೆ ಅನ್ವಯಿಸುವುದಿಲ್ಲ. **"ಮುಗಿದು ಹೋದ ಮದುವೆಗೆ ಮೇಳವೇಕೆ"** ಎನ್ನುವಂತೆ ದೇವರಾಗಿ ಇರುವವನನ್ನು ದೇವರಾಗಿದ್ದಾನಾ ಇಲ್ಲವೆ ಎಂದು ನೋಡಬೇಕಾದ ಕೆಲಸವಿಲ್ಲ. ಹಾಗೆ ಮೋಕ್ಷವಾಗಿದ್ದ ಗುರುವನ್ನು ಮೋಕ್ಷ ಹೊಂದುವನಾ ಹೊಂದುವುದಿಲ್ಲವಾ ಎಂದು ನೋಡಬೇಕಾದ ಕೆಲಸವಿಲ್ಲ. ಆದ್ದರಿಂದ ಗುರುವಿಗೆ ಹಗಲು, ಶುಕ್ಲಪಕ್ಷ, ಉತ್ತರಾಯಣ ಕಾಲಗಳು ಅನ್ವಯಿಸುವುದಿಲ್ಲ. ಆತನು ಯಾವ ಕಾಲದಲ್ಲಿ ಸತ್ತುಹೋದರೂ ಆತನು ಆತನೇ, ಆತನಿಗೆ ಹುಟ್ಟು ಇಲ್ಲ, ಸಾವು ಇಲ್ಲ. ಆದರೂ ಶರೀರವನ್ನು ಧರಿಸಿದಾಗ ಹುಟ್ಟಿದಹಾಗೆ ಭ್ರಮಿಸುವಂತೆ ಮಾಡಿದ್ದಾನೆ. ಹಾಗೆ ಸತ್ತುಹೋಗುವಾಗ ಮರಣಿಸಿದ ಹಾಗೆ ಭ್ರಮಿಸುವಂತೆ ಮಾಡಿದ್ದಾನೆ. ಗುರು ಮರಣಿಸುತ್ತಾನಾ ಎಂದರೆ ಮರಣಿಸುತ್ತಾನೆ. ಆದರೆ ಅದು ಎಲ್ಲರಹಾಗೆ ಮರಣ ಅಲ್ಲವೆಂದು ತಿಳಿಯಬೇಕು. ಮನುಷ್ಯನಿಗೆ, ದೇವರಿಗೆ ಸಾವು ಹುಟ್ಟುಗಳಲ್ಲಿ ಎಷ್ಟು ವ್ಯತ್ಯಾಸವಿದೆಯೊ ತಿಳಿಯಬೇಕೆಂದರೆ **"ಜನನ ಮರಣ ಸಿದ್ಧಾಂತ"** ಅನ್ನುವ ಪುಸ್ತಕವನ್ನು ಓದಿರಿ.



# ಗುರು ಪೌರ್ಣಮಿ

ಕೊನೆ ಅಥವಾ ಅಂತ್ಯ ಎಂದರೆ ಎಲ್ಲರಿಗು ತಿಳಿದಿದೆ. ಪ್ರಪಂಚದಲ್ಲಿ ಎಲ್ಲದಕ್ಕೂ ಮೊದಲು, ಕೊನೆ ತಪ್ಪದೆ ಇರುತ್ತವೆ. ಪ್ರಪಂಚದಲ್ಲಿ ಮೊದಲು, ಅಂತ್ಯ ಇಲ್ಲದಿರುವವು ಯಾವುವೂ ಇಲ್ಲ. ಪ್ರಪಂಚವೇ ಆದಿ ಅಂತ್ಯದಿಂದ ಕೂಡಿಕೊಂಡಿದೆ. ಹೆಸರಿಗೆ ಊರಿಗೆ, ಗೀತೆಗೆ ಬರಹಕ್ಕೆ, ಕೆಲಸಕ್ಕೆ ಹಾಡಿಗೆ, ಆಟಕ್ಕೂ ಪಾಠಕ್ಕೂ, ಹೊಲಕ್ಕೆ ಸಾಲಿಗೆ, ಎಲ್ಲದಕ್ಕೂ ಮೊದಲು ಕೊನೆ ಇದ್ದೇ ಇವೆ. ಆದ್ದರಿಂದಲೆ ಏನೊ ಯಾರಿಗಾದರೂ ಯಾವುದನ್ನಾದರು ನಿನ್ನ ಅಂತ್ಯನೋಡುತ್ತೇನೆಂದು ಅನ್ನುತ್ತಿರುತ್ತೇವೆ. ಇದರಿಂದ ಕೊನೆ ಎಲ್ಲರಿಗೂ ಅಂತ್ಯ ಎಲ್ಲದಕ್ಕೂ ಇದೆಯೆಂದು ತಿಳಿಯುತ್ತದೆ. ಎಲ್ಲದಕ್ಕೂ ಕೊನೆ ಇರುವಾಗ ಒಂದೇ ಒಂದಕ್ಕೆ ಅಂತ್ಯ ಇಲ್ಲ. ಅದೇ ಗೋಳ ಅಥವಾ ಗುಂಡಾಗಿರುವುದು. ಗುಂಡಾಗಿರುವ ಎಂಬ ಪದದಿಂದ ಹುಟ್ಟಿದ ಪದವೇ ಗುರು ಎನ್ನುವ ಪದ. ಪರಮಾತ್ಮನಿಗೂ ಸಹ ಆದಿ ಅಂತ್ಯವಿಲ್ಲ. ಆದಿ ಮಧ್ಯ ಅಂತ್ಯರಹಿತನಾದ ಪರಮಾತ್ಮ ಭೂಮಿ ಮೇಲೆ ಸಾಕಾರ ರೂಪದಿಂದ ಭಗವಂತನಾಗಿ ಹುಟ್ಟಿದಾಗ ಆತನನ್ನೇ ಗುರು ಅನ್ನುತ್ತಿದ್ದೇವೆ. ಆದಿ ಅಂತ್ಯಗಳು ಇಲ್ಲವಾದುದ್ದರಿಂದ ಅದನ್ನೇ ಗುರು ಎನ್ನುತ್ತಿದ್ದೇವೆ. ಪರಮದೊಳಗಿನ ಪರಮಾತ್ಮನಿಗೆ, ಇಹದೊಳಗಿನ ಗುರುವಿಗೆ ಮೊದಲು ಕೊನೆಗಳು ಇಲ್ಲವೆಂದು ತಿಳಿಯಬೇಕು. ಇದರಿಂದ ಪರಮಾತ್ಮ ಎಂದರೂ, ಭಗವಂತನೆಂದರೂ, ಗುರು ಎಂದರೂ ಮೂವರು ಒಂದೇ ಎಂದು ತಿಳಿಯುತ್ತದೆ.

ಪೂರ್ವದಲ್ಲಿ ಕೆಲವರು ಹಿರಿಯರು, "ಗುರು ಗುಂಡುಕಲ್ಲಿನಂಥವನೆಂದು" ಗಾದೆಯಾಗಿ ಅನ್ನುತ್ತಿದ್ದರು. ಗುಂಡುಕಲ್ಲಿಗೂ ಸಹ ಮೊದಲು ಕೊನೆಗಳಿರುವುದಿಲ್ಲ. ಆದ್ದರಿಂದ ಗುರುವನ್ನು ಗುಂಡುಕಲ್ಲಿನೊಂದಿಗೆ ಹೋಲಿಸಿದ್ದಾರೆ. ಗುರು ಎಂದರೆ ಕೇಂದ್ರ ಎಂದು ಸಹ ಅರ್ಥವಿದೆ. ಜ್ಞಾನಕ್ಕೆ ಕೇಂದ್ರವಾದವನು ಗುರು. ಜ್ಞಾನವೆನ್ನುವುದು ಎಲ್ಲಿಯೂ ಯಾರಿಂದಲೂ ತಿಳಿದುಬರುತ್ತಿದ್ದರು, ಎಂದರೆ ಎಲ್ಲಿಯಾದರೂ ಯಾವ ಬೋಧಕರು ಹೇಳುತ್ತಿದ್ದರೂ ಅದು ಮೊದಲ ಜ್ಞಾನ

ಕೇಂದ್ರವಾದ ಗುರುವಿನಿಂದಲೆ ಬಂದಿರುತ್ತದೆ. ಅಪಾರ ಜ್ಞಾನಕೇಂದ್ರ, ವಾಸ್ತವ ಧರ್ಮನಿಲಯ ಗುರುವೇ ಆಗುವನು. ಪರಮಾತ್ಮ ಭೂಮಿ ಮೇಲೆ ಅವತರಿಸಿದಾಗ, ಭಗದಿಂದ ಹುಟ್ಟಿದವನಾದ್ದರಿಂದ ಭಗವಂತನೆಂದು, ಆದಿ, ಅಂತ್ಯಗಳು ಇಲ್ಲದವನಾದ್ದರಿಂದ ಗುರುವೆಂದು ಹೇಳಲ್ಪಡುತ್ತಿದ್ದಾನೆ. ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಜ್ಞಾನಕ್ಕೆ ಚಿಹ್ನೆ ಚಂದ್ರ. ಸಂಪೂರ್ಣ ಜ್ಞಾನಕ್ಕೆ ಚಿಹ್ನೆ ಹುಣ್ಣಿಮೆ ದಿನ ಬರುವ ಗುಂಡಾಗಿರುವ ಚಂದ್ರನು. ಹುಣ್ಣಿಮೆ ಚಂದ್ರನು ಪೂರ್ಣ ಜ್ಞಾನಕ್ಕೆ ಗುರುತು. ಮಾನವರು ದೈವವಾದ ಗುರುವನ್ನು ಗುರುತು ಮಾಡಿಕೊಳ್ಳುವಹಾಗೆ, ವರ್ಷಕ್ಕೊಂದು ಪೌರ್ಣಮಿಯನ್ನು ಗುರು ಪೌರ್ಣಮಿಯಾಗಿ ಹಿರಿಯರು ನಿರ್ಣಯಿಸಿದ್ದಾರೆ.

ಆದಿ ಅಂತ್ಯಗಳಿಲ್ಲದವನೆಂದು ಅರ್ಥ ಹೊಂದಿರುವ ಗುರುವನ್ನು ಜ್ಞಾಪಕ ಮಾಡಿಕೊಂಡು, ಸಂಪೂರ್ಣ ಜ್ಞಾನವೆಂದು ಹುಣ್ಣಿಮೆ ಚಂದ್ರನ ದಿನವಾದ ಪೌರ್ಣಮಿಯನ್ನು ಗುರು ಪೌರ್ಣಮಿಯಾಗಿ ತಿಳಿದು, ಭಗವಂತನಾದ ಗುರುವನ್ನು ಆರಾಧಿಸುವುದೆ ಗುರು ಪೌರ್ಣಮಿ ಅಂತರಾರ್ಥ. ಆಚಾರವಿದ್ದು ಅರ್ಥ ತಿಳಿಯದ ಪ್ರಜೆಗಳಿಗೆ ಗುರುವೆಂದರೆ ಏನೂ, ಗುರುಪೌರ್ಣಮಿ ಎಂದರೆ ಏನೂ ತಿಳಿಯದು. ಅರ್ಥ, ಅಂತರಾರ್ಥ ತಿಳಿಯದ ಪ್ರಜೆಗಳಿಗೆ ದೇವರ್‍ಯಾರೊ, ದೆವ್ವಯಾವುದೊ, ಗುರುವ್ಯಾರೊ, ಬೋಧಕನ್ಯಾರೊ ತಿಳಿಯದು. ತಿಳಿಯದ ತನವನ್ನು ಆಸರೆಯಾಗಿ ಮಾಡಿಕೊಂಡು ಮಾಯೆ ತಾನೆ ಗುರುವೆಂದು ಎಲ್ಲರಿಗೂ ತಿಳಿಯುವ ಹಾಗೆ ಪ್ರಚಾರ ಮಾಡಿಕೊಂಡಿದೆ. ಜ್ಞಾನ, ಧರ್ಮ ತನ್ನ ಹತ್ತಿರ ಇಲ್ಲದಿದ್ದರೂ ತನ್ನ ಮಹತ್ವಗಳೆ ಜ್ಞಾನವೆಂದು ತಾನು ಮಾಡುವ ದಾನಗಳನ್ನೇ ಧರ್ಮಗಳೆಂದು ಎಲ್ಲರಿಗೂ ಅರ್ಥವಾಗುವಹಾಗೆ ಮಾಡಿ ಎಲ್ಲರನ್ನು ತನ್ನ ಕಡೆ ತಿರುಗಿಸಿಕೊಂಡು, ತಾನೇ ಗುರುವೆಂದು ತಿಳಿಯುವ ಹಾಗೆ, ಮಾಯೆ ಮಾಡುವುದರಿಂದ ಪ್ರಜೆಗಳು ನಿಜವಾದ ದೈವ ಗುರುವನ್ನು ಬಿಟ್ಟು, ಮಾಯೆ ಗುರುವನ್ನು ಆಶ್ರಯಿಸುವುದು, ಆ ಗುರುವನ್ನೇ ಗುರುಪೌರ್ಣಮಿ ದಿನದಂದು ಜ್ಞಾಪಕ ಮಾಡಿಕೊಳ್ಳುವುದು ಆರಾಧಿಸುವುದು ನಡೆಯುತ್ತದೆ. ಗುರುಪೌರ್ಣಮಿ ದಿನ ಕೆಲವು ಲಕ್ಷಗಳ ಕಡೆ

ಗುರುಪೂಜೆಗಳು ನಡೆಯುತ್ತಿದ್ದರೂ, ಕನಿಷ್ಟ ಒಂದು ಕಡೆಯಾದರು ನಿಜ ಗುರುವಿನ ಪೂಜೆ ನಡೆಯುತ್ತಿದೆಯೆನ್ನುವ ನಂಬಿಕೆ ಇಲ್ಲ. ಪರಮಾತ್ಮನಿಗೆ ವಿರುದ್ಧವಾದ ಮಾಯೆ ಪರಮಾತ್ಮನ ಕಡೆ ಯಾರೂ ಹೋಗದಂತೆ, ತನ್ನ ಕಡೆಯೇ ಎಲ್ಲರು ಇರುವಹಾಗೆ, ಎಷ್ಟೋ (ಪಥಕಗಳೊಂದಿಗೆ) ಪ್ರಜೆಗಳಿಗೆ ಒಳ್ಳೆಯದನ್ನು ಮಾಡುತ್ತಾ ಎಲ್ಲರನ್ನು ತನ್ನ ಕಡೆಗೆ ಸೆಳೆದುಕೊಳ್ಳುತ್ತದೆ. ಮಾಯೆಯಲ್ಲಿ ಬಿದ್ದ ಎಷ್ಟೋ ಜನರು ಗುರುವನ್ನು ಗುರುತಿಸದೆ ಹೋಗುವುದಲ್ಲದೆ, ದೈವವನ್ನು ಗುರುವಲ್ಲವೆಂದು ನಿಂದಿಸುವುದು, ಅವಮಾನ ಪಡಿಸುವುದು ಮಾಡುತ್ತಾ, ಮಾಯೆಯನ್ನು ಗುರುವೆಂದು ಲೆಕ್ಕಿಸಿ ಆನಂದದಿಂದ ಆರಾಧಿಸುವುದು ನಡೆಯುತ್ತದೆ. ಭಕ್ತಿ ಎನ್ನುವುದಿದ್ದರೂ ಪ್ರತಿಯೊಬ್ಬನು ತಮ್ಮ ಭಕ್ತಿಯನ್ನು ದೇವತೆಗಳ ಕಡೆ, ಮಹತ್ವಗಳನ್ನು ತೋರಿಸುವ ಬಾಬಾಗಳ ಕಡೆ, ಪುರಾಣಗಳು ಬೋಧಿಸುವ ಬೋಧಕರ ಕಡೆ ತೋರಿಸುತ್ತಾ, ಗುರುವನ್ನು ಅಗೌರವ ಪಡಿಸುತ್ತಿದ್ದಾರೆ. ಕ್ಷುದ್ರ ದೇವತೆಗಳಿಗೆ ಮುಗಿಯುವ ಒಬ್ಬ ಸಾಮಾನ್ಯನು ಪದವಿಯಲ್ಲಿದ್ದರೆ, ದೇವತೆಗಳಿಗೆ ದೇವನಾದ ಗುರುವನ್ನು ತನ್ನ ಮುಂದೆ ನಿಲ್ಲಿಸಿಕೊಂಡು ಕನಿಷ್ಠ ಕುಳಿತುಕೊ ಎನ್ನದೆ ಹೀಯಾಳಿಸಿ ಮಾತನಾಡುವುದು ನಡೆಯುತ್ತದೆ. ಮಾಯೆ ಪ್ರಭಾವವು ಮನುಷ್ಯರಲ್ಲಿ ಇರುವವರೆಗು ಅವರಿಗೆ ಮಾಯೆ ಗುರುಗಳು ದೊಡ್ಡದಾಗಿ ಕಾಣಿಸುವುದು, ಭಗವಂತನಾದ ನಿಜಗುರು ನೀಚವಾಗಿ ಕಾಣಿಸುವುದು ಸಹಜವೆ. ಮಾಯೆಗೆ ಪರಮಾತ್ಮನಿಗೆ ನಡೆಯುತ್ತಿರುವ ಆಟದಲ್ಲಿ ಸಮಸ್ತವು ಮಾಯೆಕಡೆ ಇರುವಾಗ ಒಂದೇ ಒಂದು ಜ್ಞಾನ, ಧರ್ಮ ಪರಮಾತ್ಮನ ಕಡೆ ಇವೆ. ಮಾಯೆಕಡೆ ಮಹತ್ವಗಳು, ದಾನ, ಧನಿಕರನ್ನು ಮಾಡುವುದು, ಕೋರಿದ ಕಾರ್ಯಗಳು ನೆರವೇರಿಸುವುದು ಇಂತಹ ಎಷ್ಟೋ ಸಾವಿರ ಆಯುಧಗಳು ಇರುವಾಗ ಪರಮಾತ್ಮ ಕಡೆ ಧರ್ಮಗಳು ಎನ್ನುವ ಆಯುಧ ಒಂದೇ ಇದೆ. ಈ ವಿಷಯಕ್ಕೆ ಉದಾಹರಣೆಯಾಗಿ ದ್ವಾಪರಯುಗದಲ್ಲಿ ಭಾರತ ಯುದ್ಧದಲ್ಲಿ ನನ್ನೊಂದಿಗೆ ಸಮಾನವಾದ ಹತ್ತು ಸಾವಿರಜನ ಯೋಧರು ಎಲ್ಲರು ಒಂದು ಕಡೆ, ನಾನೊಬ್ಬನೇ ಒಂದು ಕಡೆ ಇರುತ್ತೇನೆಂದಿದ್ದಾನೆ. ಹತ್ತು ಸಾವಿರ ಜನ ಯೋಧರು ಆಯುಧ ಗಳನ್ನಿಡಿದು ಹೋರಾಡಿದರೆ, ನಾನು ಆಯುಧವನ್ನಿಡಿಯದೆ ಸುಮ್ಮನೆ ಮಾತುಗಳು

ಹೇಳುವವನಾಗಿ ಇರುತ್ತೇನೆಂದಿದ್ದಾನೆ. ಆ ದಿನ ಹೇಳಿದ ಅಂತರಾರ್ಥವೇನೆಂದು ಯೋಚಿಸಿದರೆ ನನ್ನಿಂದ ತಯಾರು ಮಾಡಲ್ಪಟ್ಟ ನನ್ನ ಮಾಯೆ, ನನ್ನೊಂದಿಗೆ ಎಷ್ಟೋ ಪ್ರಜಾನುಕೂಲ ಸಂಘಟನೆಗಳೆನ್ನುವ ಆಯುಧಗಳಿಂದ ಹೋರಾಡುತ್ತಾ ಜೀವಿಗಳನ್ನು ತನ್ನಕಡೆ ಸೆಳೆದುಕೊಂಡು ಯುದ್ಧದಲ್ಲಿ ಗೆಲ್ಲಬೇಕೆಂದು ನೋಡುತ್ತದೆ. ನಾನು ಮಾತ್ರ ಯಾವ ಸಂಘಟನೆಗಳನ್ನು ಆಯುಧಗಳನ್ನು ಹಿಡಿಯದೆ, "ಧರ್ಮಗಳೆನ್ನುವ" ಮಾತುಗಳ ಆಯುಧಗಳಿಂದಲೇ ಹೋರಾಡುತ್ತೇನೆಂದು ತಿಳಿಸಿದಹಾಗಿದೆ.

ಈ ಕಾಲದಲ್ಲಿ ಮಾಯೆ ಅನೇಕ ಮಾರ್ಗಗಳಲ್ಲಿ ಮನುಷ್ಯರನ್ನು ತನ್ನ ಕಡೆಗೆ ಸೆಳೆದುಕೊಳ್ಳುತ್ತಾ, ತಾನೇ ದೈವವಾಗಿ ಲೆಕ್ಕಿಸಿ ಎಷ್ಟೋ ದೇವಾಲಯಗಳನ್ನು ಸಹಿತ ಕಟ್ಟಿಸಿಕೊಂಡು, ದೈವದ ಹಾಗೆ ಬಣ್ಣ ಬದಲಾಯಿಸಿಕೊಂಡು ಕಾಣಿಸುತ್ತಿದೆ. ಮನುಷ್ಯರ್‍ಯಾರು ಗುರುತಿಸದ ಮಾಯೆಯನ್ನು, ಪರಮಾತ್ಮನೇ ಗುರುತಿಸಬೇಕು. ಪರಮಾತ್ಮ ಇದು "ಮಾಯೆ" ಎಂದು ಹೇಳಿದರೂ **ಪರಮಾತ್ಮನ ಹಾಗೆ ಇರುವ ಮಾಯೆಯನ್ನು ಪರಮಾತ್ಮನೆಂದೇ ನಂಬುತ್ತಾ, ಪರಮಾತ್ಮನನ್ನೇ ಮಾಯೆಯಾಗಿ ತಿಳಿಯುವವರು ಇದ್ದಾರೆ**. ಇಂತಹ ಪರಿಸ್ಥಿತಿಯಲ್ಲಿ ನಾವಿದ್ದೇವೆ. ಈ ಸ್ಥಿತಿಯಲ್ಲಿ ಮಾಯೆ ಯಾರೊ, ಗುರು ಯಾರೊ ಗುರುತಿಸುವುದು ಬಹಳ ಕಷ್ಟ. ಒಂದುವೇಳೆ ನೀನು ಮಾಯೆಯನ್ನು ಬಿಟ್ಟು ದೇವರ ಕಡೆ ಹೋಗುತ್ತಿದ್ದೇನೆಂದು ಅಂದು ಕೊಂಡರೂ, ನಿಜ ಗುರುವನ್ನು ಎಷ್ಟೋ ವರ್ಷಗಳಿಂದ ಗುರುತಿಸಿದರೂ, ಮಾಯೆ ಅಂದುಕೊಂಡರೆ ನಿಜಗುರುವನ್ನು ಮಾಯೆಯೆಂದು, ಮಾಯೆಯನ್ನು ಗುರುವೆಂದು ನಿನ್ನಿಂದಲೆ ಹೇಳಿಸುತ್ತದೆ. ದೇವರು ಎಲ್ಲ ಆಯುಧಗಳನ್ನು ಮಾಯೆಗೆ ಕೊಟ್ಟಿದ್ದಾನೆ. ದೇವರದು ಬರೀಮಾತುಗಳಲ್ಲದೆ ಬೇರೇನೂ ಇಲ್ಲ. ಬರೀಮಾತುಗ ಳಿಂದ ನಮಗೇನು ಲಾಭವೆಂದು ತುಂಬಿದಗಂಟುಗಳನ್ನು ಕೊಡುವ ಮಾಯೆ ಕಡೆ ಹೋಗುತ್ತೀರೋ, ಬರೀಗಂಟು ಇರುವ ಪರಮಾತ್ಮನ ಕಡೆಗೆ ಹೋಗುತ್ತೀರೊ ನೀವೇ ನಿರ್ಣಯಿಸಿಕೊಳ್ಳಿ. ಸರ್ವರಿಗೂ ಪ್ರಕೃತಿ ಅಮ್ಮ, ಪರಮಾತ್ಮ ಅಪ್ಪ ಎಂದು ತಿಳಿದಿದೆಯೆಂದುಕೊಳ್ಳುತ್ತೇನೆ. ಒಟ್ಟಾರೆ ಅಮ್ಮ ಗಂಟು, ಅಪ್ಪನ ಗಂಟು ಎರಡು ಇವೆ. ಅಮ್ಮಗಂಟು ತುಂಬಿರುವುದು. ಅಪ್ಪನ ಗಂಟು ಬರೀದು.

ಪ್ರಪಂಚದಲ್ಲಿ ತುಂಬಿದ ಗಂಟಾದ ನಿಮ್ಮ ಅಮ್ಮನ ಗಂಟು ಬೇಕೋ, ಬರೀಗಂಟಾದ ನಿಮ್ಮ ಅಪ್ಪನ ಗಂಟು ಬೇಕೋ ನೀವೇ ನಿರ್ಣಯಿಸಿಕೊಳ್ಳಿ.

# ಗುರು–ಪೌರ್ಣಮಿ

ಪೌರ್ಣಮಿ ಅಂದರೆ ಚಂದ್ರನು ಸಂಪೂರ್ಣವಾಗಿ ಕಾಣಿಸುವ ದಿನ. ಚಂದ್ರನು ಸಂಪೂರ್ಣವಾಗಿ ಕಾಣಿಸುವುದರಿಂದ ನಮಗೇನು ಉಪಯೋಗವೊ ಬಹಳ ಜನರಿಗೆ ತಿಳಿದಿದೆಯೆಂದುಕೊಳ್ಳುತ್ತೇನೆ. ನಮಗೆ ತಿಳಿದ ಉಪಯೋಗ ಚಂದ್ರನು ಬೆಳದಿಂಗಳಿಂದ ಪ್ರಕಾಶಿಸುವುದೇ. ಬೆಳದಿಂಗಳ ಪ್ರಕಾಶವನ್ನು ತಂಪಾಗಿ, ಹಾಯಾಗಿ ಎಂದು ಎಷ್ಟೋ ಕವಿಗಳು ಬಹು ಅಚ್ಚುಕಟ್ಟಾಗಿ ತಮ್ಮ ಕವಿತ್ವದಲ್ಲಿ ವರ್ಣಿಸಿಕೊಂಡಿದ್ದಾರೆ. ಯಾರು ಏನು ಹೇಳಿದರೂ, ಬೆಳದಿಂಗಳನ್ನು ಕುರಿತು ನಮಗೆ ತಿಳಿಯದ ವಿಷಯವೊಂದಿದೆ. ಚಂದ್ರನು ಅಮೃತ ಸ್ವರೂಪನು. ಮೃತ ಅಂದರೆ ಮರಣವೆಂದು, ಅಮೃತವೆಂದರೆ ಮರಣವಿಲ್ಲದೆಂದು ಅರ್ಥ. ಅಮೃತ ಸ್ವರೂಪವೆಂದರೆ ಮರಣವಿಲ್ಲದ ಸ್ವರೂಪಹೊಂದಿರುವುದೆಂದು ಅರ್ಥ. ನಿಜವಾಗಿ ಅಂತಹ ಶಕ್ತಿ ಚಂದ್ರನಿಗೆ ಇದೆಯಾ ಎಂದು ವಿಚಾರಿಸಿದರೆ ಆ ಮಾತು ವಾಸ್ತವವೇ ಎನ್ನುವುದಕ್ಕೆ ಆಧಾರವಿದೆ. ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗವೆನ್ನುವ ಅಧ್ಯಾಯದಲ್ಲಿ 13ನೇ ಶ್ಲೋಕದಲ್ಲಿ ***"ಪುಷ್ಣಾಮಿ ಚೌಷಧೀ ಸ್ಸರ್ವಾ ಸ್ಸೋಮೋ ಭೂತ್ವಾರಸಾತ್ಮಕಃ"*** ಎನ್ನುವ ವಾಕ್ಯವಿದೆ. ಅದರ "ಅರ್ಥ ನಾನು ಅಮೃತಮಯನಾದ ಚಂದ್ರನಾಗಿ, ಭೂಮಿ ಮೇಲಿರುವ ಔಷಧಗಳನ್ನು ಪೋಷಿಸುತ್ತಿದ್ದೇನೆ" ಎಂದು ದೇವರೆಂದಿದ್ದಾನೆ. ನಿಜವಾಗಿ ಚಂದ್ರನು ತನ್ನ ಕಿರಣಗಳನ್ನು ಭೂಮಿಮೇಲೆ ಪ್ರಸಾರ ಮಾಡುತ್ತಾ ಭೂಮಿ ಮೇಲಿರುವ ಔಷಧ ಮೂಲಿಕೆಗಳಿಗೆ ಔಷಧ ಶಕ್ತಿಯನ್ನು ಕೊಡುತ್ತಿದ್ದಾನೆ. ಚಂದ್ರಕಾಂತಿಯಿಂದ ಔಷಧ ಶಕ್ತಿಯನ್ನು ಹೊಂದಿರುವ ಮೂಲಿಕೆಗಳು ಮಾನವನ ರೋಗಗಳನ್ನು ಹೋಗಲಾಡಿಸಿ, ಆ ರೋಗದಿಂದ ವಿಮುಕ್ತಿಯನ್ನು ಮಾಡುತ್ತಿವೆ.

ಒಬ್ಬ ಮನುಷ್ಯ ಒಂದು ರೋಗದಿಂದ ಹೊರಬೀಳಬೇಕೆಂದರೆ ಔಷಧ ಬೇಕು. ಔಷಧ ಮೂಲಿಕೆಗಳಿಂದ ಲಭಿಸುತ್ತದೆ. ಮೂಲಿಕೆಗಳಿಗೆ ಚಂದ್ರನಿಂದ ಔಷಧಗುಣ ಬರುತ್ತದೆ. ಚಂದ್ರನಲ್ಲಿನ ಅಮೃತಕ್ಕೆ ಮೂಲಕಾರಣ ಪರಮಾತ್ಮ ಶಕ್ತಿಯೆಂದು ತಿಳಿಯುತ್ತದೆ. ಇಂದಿನ ಕಾಲದಲ್ಲಿ ಗಿಡಗಳ ಮೂಲಿಕೆಗಳನ್ನು ಯಾರೂ ಔಷಧವಾಗಿ ಬಳಸುವುದಿಲ್ಲ ಅಲ್ಲವೆ! ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ, ಈಗ ನಾವು ಬಳಸುವ ಔಷಧಗಳಾದ ಟಾಬ್ಲೆಟ್ಸ್, ಇಂಜೆಕ್ಷನ್‌ಗಳು ಸಹ ಬಹಳ ಗಿಡಗಳಿಂದ ತಯಾರಾಗಿರುವವುಗಳೇ. ಆಸ್ತಮಗೆ ಬಳಸುವ ಅಡ್ರಿನಲಿನ್ ಇಂಜಕ್ಷನ್ ಬಿಲ್ವಪತ್ರಿ ಗಿಡದಿಂದ ತಯಾರಾಗಿರುವುದೇ. ಹಾಗೆ ವತ್ಸನಾಭಿಯಂಥ (ಉಮ್ಮತ್ತಿ) ಗಿಡದಿಂದ ಬೆಲ್‌ಡಾನ್ ಪ್ಲಾಸ್ಟರು ಮೊದಲಾದವುಗಳು ತಯಾರಾಗಿವೆ. ಕೆಲವು ಅಲ್ಲೋಪತಿ ಔಷಧಗಳಲ್ಲದೆ ಆಯುರ್ವೇಧಿಕ್‌ನಲ್ಲೂ, ಹೋಮಿಯೋಪತಿ ವೈಧ್ಯದಲ್ಲಿಯೂ ಎಲ್ಲ ಔಷಧಿಗಳು ಮೂಲಿಕೆಗಳಿಂದ, ಗಿಡಗಳಿಂದ ತಯಾರಾಗಿವೆ. ಪೂರ್ವದಲ್ಲಿ ಎರಡು ನೂರು ವರ್ಷಗಳ ಕೆಳಗೆ ಮೂಲಿಕಾ ವೈದ್ಯ ಬಹಳ ಪ್ರಚಾರದಲ್ಲಿ ಇರುತ್ತಿತ್ತು. ಹಾವಿನ ವಿಷಕ್ಕು, ಚೇಳಿನ ವಿಷಕ್ಕೂ ಇಂದಿಗೂ ಮೂಲಿಕಾ ವೈದ್ಯಕ್ಕೆ ಸಾಟಿಯಿರುವ ಔಷಧಿಗಳೇ ಇಲ್ಲ. “ಪ್ರತಿ ಎಲೆಯು ಒಂದು ಔಷಧವೇ” ಎನ್ನುವ ಸೂತ್ರವು ಅಂದಿಗೂ ಇಂದಿಗೂ ಸಜೀವವಾಗಿಯೇ ಇದೆ.

ಪೌರ್ಣಮಿ ದಿನದಂದು ಉತ್ತರ, ದಕ್ಷಿಣ ಧೃವಗಳಾಗಿ ಇರುವ ಗುರುತ್ವಾಕರ್ಷಣೆ ಶಕ್ತಿ (ಅಯಸ್ಕಾಂತ ಶಕ್ತಿ) ಸಹ ಅಧಿಕವಾಗಿ ಇರುತ್ತದೆಂದು ಖಗೋಳ ಶಾಸ್ತ್ರಕಾರರು ಸಹ ಹೇಳುತ್ತಿದ್ದಾರೆ. ಆ ದಿನ ವಾತಾವರಣದಲ್ಲಿ ಸಹ ಸ್ವಲ್ಪ ಬದಲಾವಣೆ ಇದೆ ಎನ್ನುವುದಕ್ಕೆ ಸಮುದ್ರದಲ್ಲಿನ ಅಲೆಗಳು ಬಹಳ ಎತ್ತರಕ್ಕೇಳುವುದೇ ನಿದರ್ಶನ. ಇನ್ನೂ ನಮಗೆ ತಿಳಿಯದ ವಿಷಯವೇನೆಂದರೆ! ಪೌರ್ಣಮಿ ದಿನದಂದು ಚಂದ್ರನು ಸಂಪೂರ್ಣನಾಗಿ ಅಮೃತದಿಂದ ಕೂಡಿಕೊಂಡಿರುವ ಕಿರಣಗಳನ್ನು ಕೆಳಗೆ ಪ್ರಸರಿಸುತ್ತಾನೆಂದು ಪೂರ್ವದಲ್ಲಿ ಹಿರಿಯರು ತಿಳಿಸಿದ್ದಾರೆ. ಆದ್ದರಿಂದ ಪ್ರತಿ ಪೌರ್ಣಮಿ ಪ್ರತ್ಯೇಕತೆಯನ್ನು ಹೊಂದಿ

ರುತ್ತದೆ. ಪೂರ್ವದಲ್ಲಿ ಪೌರ್ಣಮಿಯ ಬೆಲೆಯನ್ನು ತಿಳಿದವರು ಆ ದಿನ ರಾತ್ರಿಯೆಲ್ಲಾ ಹೊರಗಡೆ ಬೆಳದಿಂಗಳಲ್ಲಿ ಕಳೆಯುತ್ತಿದ್ದರು. ಅದರಿಂದ ಕೆಲವು ರೋಗಗಳು ಅವರಿಂದ ದೂರವಾಗಿ ಹೋಗುತ್ತಿದ್ದವು. ಕೆಲವರಿಗೆ ಶರೀರದಲ್ಲಿ ರೋಗನಿರೋಧಕ ಶಕ್ತಿ ಬೆಳೆಯುತ್ತಿತ್ತು. ಕಣ್ಣಿನ ದೃಷ್ಠಿಯಲ್ಲಿ ಲೋಪವಿರುವವರು ಪೌರ್ಣಮಿ ದಿನದಂದು ತಲೆಸ್ನಾನ ಮಾಡಿ ಅಂಗಾತ ಮಲಗಿಕೊಂಡು ನೇರವಾಗಿ ಚಂದ್ರನನ್ನು ನೋಡುತ್ತಿದ್ದರು. ಹಾಗೆ ನೋಡುವುದರಿಂದ ಚಂದ್ರಕಿರಣಗಳು ನೇರವಾಗಿ ಕಣ್ಣುಗಳ ಮೇಲೆ ಬೀಳುವುದರಿಂದ ಕೆಲವು ತಿಂಗಳುಗಳಿಗೆ ಅವರ ಕಣ್ಣಿನೊಳಗಿನ ಲೋಪಗಳು ಹೋಗುತ್ತಿದ್ದವು. ಈ ವಿಧವಾಗಿ ಚಂದ್ರನು ನಿಜವಾಗಿ ಅಮೃತ ಸ್ವರೂಪನೆನ್ನುವುದಕ್ಕೆ ಎಷ್ಟೋ ಆಧಾರಗಳು ಇವೆ.

ಭೂಮಿಮೇಲೆ ಎಷ್ಟೋ ಜಾತಿ ಮೂಲಿಕೆಗಳು, ಗಿಡಗಳಿವೆ. ಎಲ್ಲದಕ್ಕೂ ಅಮೃತ ಪ್ರಧಾತ ಚಂದ್ರನೇ ಆಗಿರುವಾಗ, ಒಂದೊಂದು ಗಿಡ ಒಂದೊಂದು ಔಷಧಗುಣ ಹೊಂದಿದೆ. ಹಿಪ್ಪೆಗಿಡ' ಮೂಲಿಕೆ ಚೇಳು ವಿಷಕ್ಕೆ ಔಷಧವಾಗಿದೆ. ಬಿಳಿ 'ಈಶ್ವರಿ' ಮೂಲಿಕೆ ಹಾವಿನ ವಿಷಕ್ಕೆ ಔಷಧ. ಹೀಗೆ ಅನೇಕ ಮೂಲಿಕೆಗಳು ಅನೇಕ ಔಷಧಗುಣಗಳು ಹೊಂದಿರುವವುಗಳಾಗಿವೆ. ಇನ್ನೂ ಯೋಚಿಸಿ ನೋಡಿದರೆ, ಕೆಲವು ಗಿಡಗಳ ಸ್ವಭಾವವನ್ನು ಅನುಸರಿಸಿ ಚಂದ್ರನ ಕಿರಣಗಳು ಕೆಲಸ ಮಾಡುತ್ತವೆಂದು ಸಹ ತಿಳಿಯುತ್ತದೆ. ಒಂದೇ ಗಿಡ ಎರಡು ವಿಧಗಳಾಗಿ ಕೆಲಸ ಮಾಡುವಹಾಗೆ ಚಂದ್ರಕಿರಣಗಳು ಕೆಲಸಮಾಡುತ್ತವೆ. ಉದಾಹರಣೆಗೆ ಉಮ್ಮತ್ತಿ (ಬೆಲ್‌ಡಾನ) ಗಿಡ ಉನ್ಮಾದ, ಹುಚ್ಚು ಇರುವವರಿಗೆ ಔಷಧವಾಗಿ ಕೆಲಸ ಮಾಡುತ್ತದೆ. ಹುಚ್ಚು ಇಲ್ಲದ ಒಳ್ಳೆಯವರು ಗಿಡವನ್ನು ಪರೀಕ್ಷಿಸಬೇಕೆಂದು ಅದೇ ಕೆಲಸವಾಗಿ ಬಳಸಿದರೆ ಚೆನ್ನಾಗಿರುವವರಿಗೆ ಹುಚ್ಚುಹಿಡಿಯುತ್ತದೆ. ಅದೇ ವಿಧವಾಗಿ ಮತ್ತೊಂದು ಉದಾಹರಣೆ ಸಹ ಇದೆ. ಹಾವು ಕಚ್ಚಿದವನಿಗೆ ವಿಷಪ್ರಭಾವದಿಂದ ಮತ್ತೇರಿ ಸಾಯುವ ಪರಿಸ್ಥಿತಿ ಇದ್ದಾಗ, ಅಂತಹವನಿಗೆ ವಿಷಮುಷ್ಠಿ ಗಿಡವನ್ನು ಉಪಯೋಗಿಸಿದರೆ ಔಷಧವಾಗಿ ಕೆಲಸ ಮಾಡುತ್ತದೆ, ಅಪಾಯ ತಪ್ಪುವುದು. ಹಾಗಲ್ಲದೆ ಹಾವು ಕಚ್ಚದವನು, ವಿಷಪ್ರಭಾವ ಇಲ್ಲದವನು,

ವಿಷಮುಷ್ಟಿ ಗಿಡವನ್ನು ಬಳಸಿದರೆ ಹಾವು ಕಚ್ಚದಿದ್ದರೂ ವಿಷಪ್ರಭಾವಕ್ಕೆ ಸಿಲುಕಿ ಮತ್ತೇರಿ ಸತ್ತುಹೋಗಬಹುದು. ಮಾತುಗಳು ಬಾರದ ಗಿಡಗಳು ಸಹ ತಮ್ಮನ್ನು ಸವ್ಯವಾಗಿ ನೋಡಿದರೆ ಒಳ್ಳೆಯದನ್ನು, ಅಪಸವ್ಯವಾಗಿ ನೋಡಿದರೆ ಕೆಟ್ಟದ್ದನ್ನು ಪ್ರದರ್ಶಿಸುತ್ತವೆಂದು ತಿಳಿಯುತ್ತದೆ.

ಈಗ ಅಸಲು ವಿಷಯಕ್ಕೆ ಬರೋಣ, ಗುರು ಸಂಪೂರ್ಣ ಜ್ಞಾನ ಇರುವವನು. ಭೂಮಿಯೆಲ್ಲದಕ್ಕು ಒಂದೇ ಚಂದ್ರನಿದ್ದಹಾಗೆ ಎಂದಿಗಾದರೂ ಪ್ರಪಂಚಕ್ಕೆಲ್ಲಾ ಒಬ್ಬನೇ ಗುರು ಇರುತ್ತಾನೆ. ಚಂದ್ರನು ಕಾಣಿಸುತ್ತಿದ್ದರೂ ಆತನ ಬೆಳದಿಂಗಳಲ್ಲಿನ ಔಷಧಶಕ್ತಿಗೆ ಮೂಲಕಾರಣ ಪರಮಾತ್ಮ. ಹಾಗೆ ಗುರು ಸ್ಥೂಲವಾಗಿ ಕಾಣಿಸುವ ಶರೀರ ಹೊಂದಿರುವ ವ್ಯಕ್ತಿ ಆಗಿದ್ದರೂ, ಆತನೊಳಗಿರುವ ಜ್ಞಾನ ಶಕ್ತಿಗೆ ಮೂಲವು ಕಾಣಿಸದ ಪರಮಾತ್ಮ. ಆಕಾಶದಲ್ಲಿ ಚಂದ್ರನು ಬೆಳದಿಂಗಳಿಂದ ಪ್ರಕಾಶಿಸಿದರೆ, ಭೂಮಿಮೇಲೆ ಗುರು ಜ್ಞಾನದಿಂದ ಪ್ರಕಾಶಿಸುತ್ತಾನೆ. ಈ ವಿಷಯವನ್ನು ತಿಳಿಯುವುದಕ್ಕೆ ಪೂರ್ವದ ಹಿರಿಯರು ಗುರುವನ್ನು, ಪೌರ್ಣಮಿಯನ್ನು ಏಕ ಮಾಡುತ್ತಾ ಗುರು ಪೌರ್ಣಮಿ ಎಂದು ಒಂದು ಪೌರ್ಣಮಿಯನ್ನು ಪ್ರತ್ಯೇಕವಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಗುರು ಪೌರ್ಣಮಿ ಎಷ್ಟೋ ಪ್ರತ್ಯೇಕತೆಯನ್ನು ಹೊಂದಿದೆ. ಪೌರ್ಣಮಿ ಎಲ್ಲರಿಗೂ ತಿಳಿದಿದೆ ಆದರೆ ಗುರುವು ಎಲ್ಲರಿಗು ತಿಳಿಯದವನು. ಪೌರ್ಣಮಿಯನ್ನು ಕುರಿತು ಆ ದಿನ ಚಂದ್ರಕಾಂತಿಯನ್ನು ಕುರಿತು ಸ್ವಲ್ಪ ತಿಳಿದುಕೊಂಡಿದ್ದೇವೆ. ಇನ್ನು ತಿಳಿದುಕೊಳ್ಳಬೇಕಾಗಿರುವುದು ಒಬ್ಬ ಗುರುವನ್ನು ಕುರಿತಾದ ವಿವರ.

ಚಂದ್ರನು ಭೂಮಿ ಮೇಲಿರುವ ಗಿಡಗಳಿಗೆ ಔಷಧಶಕ್ತಿ ಕೊಟ್ಟಹಾಗೆ, ಗುರು ಭೂಮಿಮೇಲಿನ ಮನುಷ್ಯರಿಗೆ ಜ್ಞಾನಶಕ್ತಿ ಕೊಡಬಲ್ಲನು. ಚಂದ್ರಕಾಂತಿ ಬಿದ್ದ ಗಿಡಗಳು ಮಾತ್ರ ಔಷಧಿಶಕ್ತಿಯನ್ನು ಹೊಂದುವಹಾಗೆ, ಗುರುವಿನ ಮೇಲೆ ಭಕ್ತಿ, ಶ್ರದ್ಧೆ, ವಿನಯಗಳು ಹೊಂದಿರುವವರು ಮಾತ್ರವೆ, ಜ್ಞಾನವನ್ನು ತಿಳಿದು ಜ್ಞಾನಶಕ್ತಿಯನ್ನು ಹೊಂದುವರು. ಚಂದ್ರಕಾಂತಿ ಬೀಳದ ಗಿಡಗಳು, ಚಂದ್ರನ ಅಮೃತವನ್ನು ಹೊಂದದೆ ಔಷಧಿ ಶಕ್ತಿಯನ್ನು ಸಂಪಾದಿಸಿಕೊಳ್ಳದ ಹಾಗೆ,

ಗುರುವಿನ ಬಗ್ಗೆ ವಿನಯ, ಭಕ್ತಿಯಿಲ್ಲದವರು ಜ್ಞಾನವನ್ನು ತಿಳಿಯದೆ ಜ್ಞಾನಶಕ್ತಿಯನ್ನು ಸಂಪಾದಿಸಿಕೊಳ್ಳಲಾರರು. ಚಂದ್ರನು ಅಮೃತ ಮಯನಾದಹಾಗೆ, ಗುರು ನಾಶರಹಿತ ಜ್ಞಾನಮಯನು. ಗುರುವನ್ನು ವಿನಯವಾಗಿ ಸೇವಿಸಿದವರು ಮಾತ್ರ, ಗಿಡಗಳು ಔಷಧವಾದ ಹಾಗೆ, ಸಾಧಾರಣ ಮನುಷ್ಯರು ಜ್ಞಾನಧನರಾಗಬಹುದು. ಒಂದೇ ಚಂದ್ರಕಾಂತಿ ಗಿಡಗಳಲ್ಲಿ ಔಷಧವಾಗಿ ರೋಗಿಗಳ ಬಗ್ಗೆ ಔಷಧಿಯಾಗಿ, ಆರೋಗ್ಯವಂತರ ಬಗ್ಗೆ ರೋಗವಾಗಿ ಹೇಗೆ ಪರಿಣಮಿಸುತ್ತದೊ, ಹಾಗೆ ಒಂದೇ ಗುರುಜ್ಞಾನವು ಜ್ಞಾನಶಕ್ತಿಯಾಗಿ ಬದಲಾವಣೆಯಾಗಿ ವಿಧೇಯರ ಬಗ್ಗೆ ಕರ್ಮನಿರ್ಮೂಲನೆ ಮಾಡುವಹಾಗೆ, ಅವಿಧೇಯರ ಬಗ್ಗೆ ಕರ್ಮವನ್ನು ಅಂಟಿಸುವ ಮಾಯೆಯಾಗಿ ತಯಾರಾಗುತ್ತದೆ. ಒಂದೇ ಔಷಧವು ವಿಷನಿವಾರಣೆಯಾಗಿ ಮತ್ತು ವಿಷವಾಗಿ ಹೇಗೆ ಇದೆಯೋ ಅದೇ ವಿಧದಲ್ಲಿ ಒಂದೇ ಜ್ಞಾನ, ಕರ್ಮನಿವಾರಣೆ ಮಾಡುವ ಜ್ಞಾನಶಕ್ತಿಯಾಗಿ ಮತ್ತು ಕರ್ಮವನ್ನು ಅಂಟಿಸುವ ಮಾಯೆಯಾಗಿದೆ.

ಗುರು ತುಂಬು ಪೌರ್ಣಮಿಯಂತಹವನು. ಚಂದ್ರನು ಸ್ವಚ್ಛವಾದ ಆಕಾಶದಲ್ಲಿ ಇರುವಾಗ ಒಳ್ಳೆಯ ಬೆಳದಿಂಗಳನ್ನು ಕೊಡಬಲ್ಲನು. ಚಂದ್ರನಿಗೆ ಮೇಘಗಳು ಅಡ್ಡಬಂದಾಗ ಚಂದ್ರಕಾಂತಿಯಿದ್ದರೂ ಅದು ನಮ್ಮ ವರೆಗು ಸೇರುವುದಿಲ್ಲ. ಹಾಗೆ ಶಿಷ್ಯರ ಮನಸ್ಸು ಸ್ವಚ್ಛತೆ ಹೊಂದಿದಾಗಲೆ, ಗುರು ಒಳ್ಳೆಯ ಜ್ಞಾನವನ್ನೊದಗಿಸಬಲ್ಲನು. ಗುರುವಿನ ಮುಂದೆ, ಮಾಯೆ ಎನ್ನುವ ಮೇಘಗಳು ಆವರಿಸಿಕೊಂಡ ಶಿಷ್ಯರಿರುವಾಗ, ಗುರು ಜ್ಞಾನ ಪವಿತ್ರವಾದದ್ದಾದರು, ಅದು ಕಲುಷಿತವಾಗಿಯೆ ಕಾಣಿಸುವುದು. ಚಂದ್ರನು ಒಬ್ಬನೇ, ಚಂದ್ರಕಾಂತಿ ಒಂದೇ, ಕೆಳಗೆ ಗಿಡಗಳು ಅನೇಕ ವಿಧಗಳಲ್ಲಿ ಇವೆ. ಹಾಗೇ ಗುರು ಒಬ್ಬನೇ! ಗುರುಜ್ಞಾನ ಒಂದೇ! ತಿಳಿದುಕೊಳ್ಳುವ ಮನುಷ್ಯರು ಅನೇಕ ವಿಧಗಳಲ್ಲಿ ಇದ್ದಾರೆ. ಚಂದ್ರನು ಕಾಣಿಸುತ್ತಾನೆ ಆದರೆ ದೊರಕುವನಲ್ಲ. ಹಾಗೇ ಗುರು ಕಾಣಿಸುತ್ತಾನೆ ಆದರೆ ಯಾರಿಗು ಅರ್ಥವಾಗುವವನಲ್ಲ. ಚಂದ್ರನು ಕೈಗೆ ಸಿಗದೆಹೋದರು ಚಂದ್ರ ಕಾಂತಿಯನ್ನು ನಾವು ಅನುಭವಿಸುತ್ತಿದ್ದೇವೆ. ಹಾಗೆಯೇ ಗುರು ನಮ್ಮ ಮೆದುಳಿಗೆ

ಅರ್ಥವಾಗದೆ ಹೋದರು ಆತನ ಜ್ಞಾನವನ್ನು ನಾವು ಅನುಭವಿಸುತ್ತೇವೆ. ಚಂದ್ರನು ಸ್ವಲ್ಪಕಾಲ ಕ್ಷೀಣಚಂದ್ರನಾಗಿ ಹೋಗುತ್ತಾನೆ, ಮತ್ತೆ ಸ್ವಲ್ಪಕಾಲ ವೃದ್ಧಿ ಹೊಂದುವ ಚಂದ್ರನಾಗಿ ಕಾಣಿಸುತ್ತಾನೆ. ಹಾಗೆಯೆ ಗುರು ಒಂದು ಸಮಯದಲ್ಲಿ ಜ್ಞಾನಹೀನನಾಗಿ ಕಾಣಿಸುತ್ತಾನೆ, ಮತ್ತೊಂದು ಸಮಯದಲ್ಲಿ ಜ್ಞಾನತೇಜನಾಗಿ ಕಾಣಿಸುತ್ತಾನೆ. ಚಂದ್ರನು ಅಮಾವಾಸ್ಯೆ ದಿನದಂದು ಕಾಣಿಸುವುದಿಲ್ಲ, ಪೌರ್ಣಮಿ ದಿನದಂದು ಸಂಪೂರ್ಣವಾಗಿ ಕಾಣಿಸುತ್ತಾನೆ. ಹಾಗೆ ಗುರುವು ಒಂದು ಸಮಯದಲ್ಲಿ ಅಜ್ಞಾನಿಯಾಗಿ ಮತ್ತೊಂದು ಸಮಯದಲ್ಲಿ ಸಂಪೂರ್ಣ ಜ್ಞಾನಿಯಾಗಿ ಕಾಣಿಸುತ್ತಾನೆ. ಜ್ಯೋತಿಷ್ಯಶಾಸ್ತ್ರದಲ್ಲಿ, ಚಂದ್ರನು ಜ್ಞಾನಪ್ರತಿನಿಧಿ ಮತ್ತು ಜ್ಞಾನಕ್ಕೆ ಅಧಿಪತಿ. ಹಾಗೆ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ, ಗುರು ದೈವಪ್ರತಿನಿಧಿ ಮತ್ತು ದೈವಜ್ಞಾನಕ್ಕೆ ಅಧಿಪತಿ. ಈ ವಿಧವಾಗಿ ಹೇಳಿಕೊಳ್ಳುತ್ತಾ ಹೋದರೆ ಗುರುವಿಗು, ಚಂದ್ರನಿಗು ಎಷ್ಟೋ ಹೋಲಿಕೆಗಳಿವೆ. ಆದ್ದರಿಂದಲೆ ಗುರುಜ್ಞಾನಕ್ಕು ಚಂದ್ರನ ಬೆಳದಿಂಗಳಿಗು ಅವಿನಾಭಾವ ಸಂಬಂಧವಿರುವಹಾಗೆ, ಹಿರಿಯರು ವರ್ಷದಲ್ಲಿ ಒಂದು ಪೌರ್ಣಮಿಯನ್ನು ಅದು ಆಷಾಡಮಾಸದಲ್ಲಿ ಬರುವ ಪೌರ್ಣಮಿಯನ್ನು ಗುರುಪೌರ್ಣಮಿಯಾಗಿ ನಿಯಮಿಸಿದ್ದಾರೆ.

ಗುರು ಪರಮಾತ್ಮನ ಅಂಶದಿಂದ ಹುಟ್ಟುವವನು. ಪರಮಾತ್ಮ ಅಂಶದಿಂದ ಹುಟ್ಟುವವನೇ ಭಗವಂತನೆಂದು ಮೊದಲೆ ತಿಳಿದುಕೊಂಡಿದ್ದೇವೆ. ಯಾರಾದರೆ ಭಗವಂತನೊ ಅವನೇ ಗುರುವಾಗುವನು. ಹಾಗೆ ಯಾರಾದರೆ ಗುರುವಾಗುವನೊ ಅವನೇ ಭಗವಂತನು. ಗುರು ಭಗವಂತನು ಇಬ್ಬರು ಒಂದೇ ಎಂದು ಹೇಳಬಹುದು. ಪರಮಾತ್ಮ ಅಂಶವಾದ ಭಗವಂತನು ಭೂಮಿಮೇಲೆ ಬಂದಾಗ ಆತನು ಯಾರಿಗು ತಿಳಿಯುವುದಿಲ್ಲ. ಈತನು ಭಗವಂತನೆನ್ನುವುದಕ್ಕೆ ಯಾವ ಆಧಾರಗಳು ಇರುವುದಿಲ್ಲ ಮತ್ತು ಆತನು ಹೇಳುವುದಿಲ್ಲ. ಆದ್ದರಿಂದ ಗುರುವನ್ನು ಗುರ್ತಿಸುವುದು ಬಹಳ ದುರ್ಲಭವಾದ ಕೆಲಸ. ಕೆಲವರಿಗೆ ಇಲ್ಲೊಂದು ಪ್ರಶ್ನೆ ಬರಬಹುದು. ಈಗಿನ ಕಾಲದಲ್ಲಿ ಎಷ್ಟೊಜನ ತಾವು ಗುರುಗಳೆಂದು ಹೇಳಿಕೊಳ್ಳುತ್ತಿರುವಾಗ ಮತ್ತು ಎಷ್ಟೊಜನ ತಾವು ಭಗವಂತರೆಂದು ಹೆಸರಿನ

ಕೊನೆಯಲ್ಲಾಗಲಿ, ಮೊದಲಿನಲ್ಲಾಗಲಿ ಭಗವಾನ್ ಎಂದು ಹೆಸರು ಇಟ್ಟುಕೊಂಡಿರುವಾಗ, ಗುರುಗಳು, ಭಗವಂತರು ಸಿಗುವುದು ದುರ್ಲಭವೆನ್ನುತ್ತೀರೇನೆಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ! ಮೊನ್ನೆ ಒಂದು ಟಿವಿ ಛಾನಲ್‌ನಲ್ಲಿ ಒಬ್ಬ ಸ್ವಾಮೀಜಿ ಒಂದು ಮಾತು ಹೇಳಿದ್ದಾನೆ "ನಾನು ಭಗವಂತನಲ್ಲ. ನಾನು ಅವಧೂತನು ಮಾತ್ರ" ಎಂದಿದ್ದಾನೆ. ಆ ಮಾತು ಕೇಳುತ್ತಲೆ, ಪ್ರತಿದಿನ ಟಿವಿಯಲ್ಲಿ ಕಾಣಿಸುತ್ತ ಬೋಧನೆಗಳನ್ನು ಹೇಳುತ್ತಿದ್ದ ಆತನು ಆ ಮಾತು ಹೇಳಿರುವುದು ಬಹಳ ವಿಚಿತ್ರವಾಗಿ ತೋಚಿತು. ಅಷ್ಟು ವಿಚಿತ್ರ ಏನಿದೆಯೊ ಎಂದು ಅನುಮಾನವೇ! ನಾನು ಮಕ್ಕಳನ್ನು ಹೆರುವವಳೆ ಆದರೆ ಸ್ತ್ರೀ ಮಾತ್ರ ಅಲ್ಲವೇ ಅಲ್ಲವೆಂದು ಒಬ್ಬ ಹೆಣ್ಣು ಅಂದಾಗ ಆಶ್ಚರ್ಯವಾಗದೆ ಏನಾಗುತ್ತದೆ. ಮಕ್ಕಳನ್ನು ಹೆರುವುದು ಸ್ತ್ರೀ ಎಂದು ಎಲ್ಲರಿಗು ತಿಳಿದಿರುವಾಗ, ನಾನು ಸ್ತ್ರೀ ಅಲ್ಲವೆಂದರೆ ಆಕೆಗೆ ಸ್ತ್ರೀ ಅಂದರೆ ಏನೊ ಅರ್ಥ ತಿಳಿದಿಲ್ಲವೆಂದುಕೊಳ್ಳಬೇಕು. ಹಾಗೆ ಅವಧೂತ ದೈವಧರ್ಮಗಳನ್ನು ಹೊತ್ತುಕೊಂಡು ಬಂದು ಹೇಳುವವನಾಗಿರುವಾಗ, ದೈವಧರ್ಮಗಳು ಹೇಳುವವನೇ ಭಗವಂತನಾದಾಗ ಭಗವಂತನು ಮಾತ್ರ ಅಲ್ಲ ಅವಧೂತನೆಂದರೆ, ಹೆಂಗಸು ಮಾತ್ರ ಅಲ್ಲ ನಾನು ಹತ್ತುಜನ ಮಕ್ಕಳನ್ನು ಹೆತ್ತಿದ್ದೇನೆ ಎನ್ನುವಹಾಗಿದೆ. ಇದೆಲ್ಲದಕ್ಕು ಕಾರಣ ಭಗವಂತನೆಂದರೆ ಅರ್ಥವೇನೊ ಹಾಗೆ ಅವಧೂತ ಎಂದರೆ ಅರ್ಥವೇನೊ, ತಿಳಿಯದೆ ಹೋಗಿರುವುದೆ. ಅದೇ ವಿಧವಾಗಿ ಈ ದಿನ ಗುರುಗಳಾಗಿ ಚಲಾವಣೆ ಆಗುತ್ತಿರುವ ಬಹಳ ಜನಕ್ಕೆ, ಗುರು ಎಂದರೆ ಅರ್ಥವಾಗಲಿ, ಭಗವಂತನೆಂದರೆ ಅರ್ಥವಾಗಲಿ, ಪರಮಾತ್ಮ ಎಂದರೆ ಅರ್ಥವಾಗಲಿ, ದೇವರೆಂದರೆ ಅರ್ಥವಾಗಲಿ ತಿಳಿಯದೆ ಹೋಗಿದೆ. ಒಂದೊಂದು ಪದಕ್ಕು ಒಂದೊಂದು ಪ್ರತ್ಯೇಕವಾದ ನಿರ್ವಚನ, ಭಾವವು ಇದೆಯೆಂದು ತಿಳಿಯದವರು ಅವರಿಗಿಷ್ಟ ಬಂದಹಾಗೆ ಹೇಳಿ ಕೊಳ್ಳುತ್ತಿದ್ದಾರೆ.

ಸಾಕಾರವಾಗಿ ಇರುವವನು ಭಗವಂತನು ಅಥವಾ ಅವಧೂತ ಎಂದು, ನಿರಾಕಾರವಾಗಿ ಇರುವವನು ಪರಮಾತ್ಮ ಅಥವಾ ದೇವರೆಂದು ಬಹಳ ಜನರಿಗೆ

ತಿಳಿದಿಲ್ಲ. ಆದ್ದರಿಂದ ಭಗವಂತನೆಂದು ಹೇಳಬೇಕಾದ ಸಂದರ್ಭದಲ್ಲಿ ದೇವರೆಂದು ಹೇಳುತ್ತಿದ್ದಾರೆ. ಹಾಗೆ ಪರಮಾತ್ಮ ಎಂದು ಹೇಳಬೇಕಾದ ಸಂದರ್ಭದಲ್ಲಿ ಭಗವಂತನೆಂದು ಹೇಳುತ್ತಿದ್ದಾರೆ. ಇದನ್ನನುಸರಿಸಿ ಇವರಿಗೆ ಲಿಂಗಭೇದ, ಅಂಗಭೇದ ಎರಡು ತಿಳಿದಿಲ್ಲವೆಂದು ಅರ್ಥವಾಗುತ್ತದೆ. ನೀನು ಮನೆ ಯಲ್ಲಿದ್ದೀಯಾ? ಹೊರಗಡೆ ಇದ್ದೀಯಾ? ಎಂದು ಒಬ್ಬರು ಸೆಲ್‌ಫೋನ್‌ನಲ್ಲಿ ಕೇಳಿದರೆ, ನಾನು ಅಡಿಗೆರೂಮಿನಲ್ಲಿದ್ದೇನೆಂದು ಒಬ್ಬಾಕೆ ಸಮಾಧಾನ ಹೇಳಿದಳು, ನಂತರ ಆ ಕಡೆ ಇರುವ ವ್ಯಕ್ತಿ "ಈಗ ಏನು ಮಾಡುತ್ತಿದ್ದೀಯೆಂದು" ಕೇಳಿದನು. ಅದಕ್ಕೆ ಉತ್ತರವಾಗಿ ನಾನು ಗಿಡದ ಮರೆಯಲ್ಲಿ ಮೂತ್ರ ಒಯ್ಯುತ್ತಿದ್ದೇನೆ ನಿನಗೇನು ಬೇಕು ಎಂದು ಕೇಳಿದಳಂತೆ. ಮನೆಯಲ್ಲಿ ಅಡುಗೆ ರೂಮಿನಲ್ಲಿ ಇರುವುದೇನು? ಗಿಡದ ಮರೆಯಲ್ಲಿ ಮೂತ್ರ ಒಯ್ಯುವುದು ಏನು? ಈ ಮಾತುಗಳಿಗೆ ಏನಾದರು ಹೋಲಿಕೆ ಇದೆಯಾ? ಹಾಗೆ ನಾವು ಕೇಳುವ ಜ್ಞಾನ ಬೋಧನೆಗಳಿರುತ್ತವೆ. ಉಪನ್ಯಾಸ ಹೇಳುತ್ತ ಒಬ್ಬ ಸ್ವಾಮಿ ಹೀಗೆ ಅಂದಿದ್ದಾನೆ, ಒಬ್ಬ ಮಹರ್ಷಿ ಯೋಗ ಮಾಡುತ್ತಿದ್ದರೆ ಆ ಯೋಗಶಕ್ತಿಗೆ ಶಿವನು ಕದಲಿಬಂದು ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ ಇನ್ನು ಏನು ವರ ಬೇಕೊ ಕೋರಿಕೊ ಎಂದನಂತೆ. ಇಷ್ಟಕ್ಕೂ ಆತನು ಮಾಡುತ್ತಿರುವುದು ಯೋಗನಾ? ತಪಸ್ಸಾ? ಎಂದು ಹೇಳುವಾತನು ನೋಡಿಕೊಳ್ಳಲಿಲ್ಲ, ಕೇಳುವವರು ಅಷ್ಟಕ್ಕೂ ತಲೆ ಕೆಡಿಸಿಕೊಳ್ಳಲಿಲ್ಲ. ಅಲ್ಲಿ ಕೇಳುವಾತನನ್ನು ಮಹರ್ಷಿ ಮಾಡುವುದು ತಪಸ್ಸಾ, ಯೋಗನಾ ಎಂದು ಕೇಳಿದರೆ, ಏನಯ್ಯಾ ಅಷ್ಟರ ಮಟ್ಟಿಗೆ ತಿಳಿದಿಲ್ಲವೆ ಅನ್ನವೆಂದರೂ, ಅಂಬಲಿಯೆಂದರೂ ಎರಡೂ ಒಂದೇ ಅಲ್ಲವೆ! ಏನೂ ತಿಳಿಯದವರು ಸಹ ಉಪನ್ಯಾಸ ಕೇಳುವುದಕ್ಕೆ ಬರುತ್ತಾರೆಂದು ಚೀದರಿಸಿಕೊಂಡನಂತೆ. ತನಗೇನೊ ತಿಳಿದಿದೆಯೆಂದುಕೊಂಡ ಆತನನ್ನು ನೋಡಿ, ನಗಬೇಕೊ ಅಳಬೇಕೊ ಅರ್ಥವಾಗಲಿಲ್ಲ ಅಲ್ಲವೆ! ಭಗವದ್ಗೀತೆಯಲ್ಲಿ "ತಪಸ್ವಿಭ್ಯೋದಿಕೋ ಯೋಗೀ" ಅನ್ನುವ ಭಗವಂತನ ಮಾತಿಗೆ ಇಲ್ಲಿ ಅರ್ಥವೆ ಇಲ್ಲದೆ ಹೋಗಿದೆಯೆಂದು ತಿಳಿಯುತ್ತದೆ. ಇಂತಹ ಜ್ಞಾನವನ್ನು ಬೋಧಿಸುವವರು ಎಷ್ಟೊ ಜನ, ಗುರುಗಳಾಗಿದ್ದು ಭಗವಂತರೆಂದು ಹೆಸರು ಇಟ್ಟುಕೊಂಡಿದ್ದಾರೆ.

ಆಕಾಶದಲ್ಲಿ ಒಂದು ಸಮಯದಲ್ಲಿ ಒಬ್ಬ ಚಂದ್ರನೇ ಇರುವಹಾಗೆ, ಭೂಮಿಮೇಲೆ ಒಂದು ಸಮಯದಲ್ಲಿ ಒಬ್ಬ ಗುರುವೇ ಇರುವನು. ಉಳಿದವರೆಲ್ಲಾ ಬೋಧಕರಾಗುತ್ತಾರೆ ಆದರೆ ಗುರುಗಳು ಆಗುವುದಿಲ್ಲ. ಗುರುವಿಗು, ಬೋಧಕನಿಗು ತಾರತಮ್ಯ ತಿಳಿಯದವರೆಲ್ಲ, ತಾವು ಗುರುಗಳೆಂದುಕೊಳ್ಳುತ್ತಿದ್ದಾರೆ. ನಕ್ಷತ್ರಗಳಲ್ಲಿ ಚಂದ್ರನಹಾಗೆ, ಬೋಧಕರಲ್ಲಿ ಗುರು ಇರುವನು. ಸಾವಿರ, ಲಕ್ಷಗಳು ಎಷ್ಟು ನಕ್ಷತ್ರಗಳಿದ್ದರೂ ಅಮಾವಾಸ್ಯೆ ದಿನದಂದು ಬೆಳಕು ಇಲ್ಲದ ಹಾಗೆ, ಭೂಮಿ ಮೇಲೆ ಗುರುವೆ ಇಲ್ಲದಿರುವಾಗ, ಎಷ್ಟುಜನ ಬೋಧಕರಿದ್ದರೂ ಜ್ಞಾನ ಬೆಳಕನ್ನು ಕೊಡಲಾರರು. ಬೋಧಿಸುವ ಬೋಧಕನು ತಾನು ಗುರುವೆಂದುಕೊಳ್ಳುವುದು (ಮಿರಗಡ ಹೂವ್ವು) ತಾನು ಚಂದ್ರನೆಂದುಕೊಂಡಹಾಗೆ ಇರುತ್ತದೆ.

ಚಂದ್ರನು ಔಷಧಶಕ್ತಿಯನ್ನು ಮೂಲಿಕೆಗಳಿಗೆ ಗಿಡಗಳಿಗೆ ಕೊಡುತ್ತಾನೆ ಅಲ್ಲವೆ! ಗುರುವು ತನ್ನ ಜ್ಞಾನವನ್ನು ಮನುಷ್ಯರಿಗೇ ಕೊಡಬೇಕು ಅಲ್ಲವೆ! ಹಾಗಿರುವಾಗ ಚಂದ್ರನ ಬೆಳದಿಂಗಳು ಕಾಡಿನಲ್ಲಿಯು, ಗುರುವಿನ ಜ್ಞಾನ ಊರಿನೊಳಗೆ ಉಪಯೋಗ ಆಗುತ್ತದಲ್ಲವೆ! ಹಾಗಿರುವಾಗ ಗುರುಗಳು ಕಾಡಿನಲ್ಲಿರಬೇಕೆನ್ನುವುದು, ಬೆಳದಿಂಗಳು ಊರಿನಲ್ಲಿ ಕಾಯಬೇಕೆಂದೆನ್ನುವುದು ಸಮಂಜಸವೇನಾ? ಕಾಡಿನಲ್ಲಿ ಗಿಡಗಳು ಮೂಲಿಕೆಗಳು ವಿಶೇಷವಾಗಿ ಇರುತ್ತವೆ. ಅಲ್ಲಿ ಚಂದ್ರಕಾಂತಿ ಎಷ್ಟು ಇದ್ದರೆ ಅಷ್ಟು ಔಷಧಗಳ ಶಕ್ತಿ ಬೆಳೆಯುತ್ತದೆ. ಅದೇ ವಿಧದಲ್ಲಿ ಊರಿನಲ್ಲಿ ಪ್ರಜೆಗಳಿರುತ್ತಾರೆ. ಗುರು ಪ್ರಜೆಗಳ ಮಧ್ಯೆದಲ್ಲಿ ಎಷ್ಟು ಹೆಚ್ಚಿಗೆ ಇದ್ದರೆ, ಅಷ್ಟು ಜ್ಞಾನ ಪ್ರಜೆಗಳಿಗೆ ತಿಳಿಯುತ್ತದೆ. ಹಾಗಲ್ಲದೆ ಗುರು ಗುಹೆಗಳಲ್ಲಿ ಇರಬೇಕೆನ್ನುವುದು, ಬೆಳದಿಂಗಳು ಊರು ಬೀಧಿಗಳಲ್ಲಿ ಕಾಯಬೇಕೆನ್ನು ವುದು ತಪ್ಪಲ್ಲವೆ! ಕೆಲವರಾದರೆ "ಕಾಡಿನಲ್ಲಿ ಕಾದ ಬೆಳದಿಂಗಳ ಮಾದರಿಯಂತೆ ವೃಥಾ ಆಗಿದೆಯೆಂದು" ಹೋಲಿಸಿ ಹೇಳುತ್ತಿರುತ್ತಾರೆ. ನಮ್ಮನ್ನು ಕೇಳಿದರೆ ಅಡವಿಗೆ ಕಾದ ಬೆಳದಿಂಗಳೆ ಸರಿಯಾದದ್ದೆಂದು, ಊರಿನಲ್ಲಿರುವ ಗುರುವೇ ಸರಿಯಾದವನೆಂದು ಹೇಳುತ್ತೇವೆ. ಕಾಡಿನಲ್ಲಿ ಇರುವವರು ಗುರುಗಳಲ್ಲವೆಂದು,

ಗುರುಗಳಿಗೋಸ್ಕರ ಕಾಡುಗಳೊಳಗೆ, ಗುಹೆಗಳೊಳಗೆ ಹೋದರೆ ಅಲ್ಲಿ ಕ್ರೂರಮೃಗ ಗಳಿರುತ್ತವೆಂದು, ಅವುಗಳಿಗೆ ಸಿಕ್ಕಿ ಸಾಯುವುದು ತಪ್ಪುವುದಿಲ್ಲವೆಂದು ವೇಮನಯೋಗಿ ತನ್ನ ಪದ್ಯದಲ್ಲಿ ಸಹ ಹೇಳಿದ್ದಾನೆ.

***ಗುಹೆಗಳೊಳಗೆ ಹೊಕ್ಕು ಗುರುಗಳನ್ನುಡುಕಲು***
***ಕ್ರೂರಮೃಗವೊಂದು ದಾರಿ ಕಾದು***
***ಮೊದಲು ಮುಕ್ತಿ ಮಾರ್ಗವದೇ ತೋರಿಸುವುದು***
***ವಿಶ್ವದಾಭಿರಾಮ ಕೇಳೊವೇಮಾ.***

ವೇಮನ ಮಾತಿನ ಪ್ರಕಾರ ಸಹ ಅಡವಿ ಕಾದ ಬೆಳದಿಂಗಳು, ಊರುಕಾದ ಗುರುವು, ಸರಿಯಾದ ಪದ್ಧತಿಯಲ್ಲಿ ಇದ್ದಹಾಗೆಂದು ತಿಳಿಯುತ್ತದೆ. ಹಾಗೆ ಅರಣ್ಯದಲ್ಲಿನ ಗುರುವು, ಊರಿನಲ್ಲಿನ ಬೆಳದಿಂಗಳು ಸರಿಯಾದ ಪದ್ಧತಿ ಅಲ್ಲವೆಂದು ಸಹ ತಿಳಿಯುತ್ತದೆ. ಚಂದ್ರನಿಂದ ಗಿಡಗಳು ಬೆಳದಿಂಗಳನ್ನು ಆಸಿಸಿದಂತೆ ಗುರುವಿನಿಂದ ಜ್ಞಾನವನ್ನು ಆಸಿಸುವುದು ಒಳ್ಳೆಯದು. ಗುರುವಿನ ಹತ್ತಿರ ಸೇರಿದ ಮನುಷ್ಯರು ಜ್ಞಾನವನ್ನು ಆಸಿಸಸದೆ ಪ್ರಪಂಚ ವಿಷಯಗಳನ್ನು ಕೋರಿದಂತಾದರೆ, ಗಿಡಗಳು ಚಂದ್ರನಿಂದ ತಣ್ಣನೆಯ ಬೆಳದಿಂಗಳನ್ನು ಕೋರದೆ ಉರಿಯುತ್ತಿರುವ ಬಿಸಿಲನ್ನು ಕೋರಿದಹಾಗೆ ಇದೆ. ಬಿಸಿಲಿಗೆ, ಬೆಳದಿಂಗಳಿಗೆ ವಿವರ ತಿಳಿದವರು, ಜ್ಞಾನಕ್ಕು, ಪ್ರಪಂಚ ಕೋರಿಕೆಗಳಿಗು ತಾರತಮ್ಯ ತಿಳಿಯಬೇಕು. ಗುರು ಹತ್ತಿರ ಸೇರಿದವರು, ಪ್ರಕೃತಿ ವಿಷಯಗಳನ್ನು ಬಿಟ್ಟು ಪರಮಾತ್ಮ ವಿಷಯಗಳನ್ನು ಕೋರಬೇಕು. ಚಂದ್ರನಿಂದ ಕಮಲದ ಹೂವು ಅರಳಿ ಲಾಭಹೊಂದಿದಹಾಗೆ, ಗುರು ಹತ್ತಿರ ಸೇರಿದವರು ಜ್ಞಾನ ಲಾಭವನ್ನು ಹೊಂದಬೇಕು. ಗುರುವನ್ನು, ಪೌರ್ಣಮಿಯನ್ನು ಬೇರೆ ಬೇರೆಯಾಗಿ ನೋಡದೆ, ಗುರುವೇ ಪೂರ್ಣನೆಂದು, ಪೂರ್ಣನೇ ಗುರುವೆಂದು ತಿಳಿದು ಗುರುಪೌರ್ಣ ಮಿಯನ್ನು ಮಾಡಿಕೊಳ್ಳಬೇಕು.



# ಗುರು

ಒಬ್ಬ ಮನುಷ್ಯನ ಶರೀರವನ್ನು ಪರಿಶೀಲಿಸಿ ನೋಡಿದರೆ ಶರೀರ ನಿರ್ಮಾಣವನ್ನು ದೊಡ್ಡ ಮೇಧಾವಿ ಸಹ ರೂಪಕಲ್ಪನೆ ಮಾಡಲಾರನೆಂದು ಹೇಳಬಹುದು. ಒಬ್ಬ ಪುರುಷ ಶರೀರವನ್ನು ತಯಾರಿಸಬೇಕೆಂದರೂ, ಸ್ತ್ರೀ ಶರೀರವನ್ನು ತಯಾರಿಸಬೇಕೆಂದರೂ ಎಷ್ಟೋ ದೊಡ್ಡ ಮೇಧಾವಿಗೂ ಸಹ ಅಂತಹ ರೂಪಕಲ್ಪನೆ ಮೆದುಳಿಗೆ ಬರುವುದಿಲ್ಲ. ಪುರುಷ ಶರೀರದಲ್ಲಿನ ಪುರುಷತ್ವವನ್ನೂ, ಸ್ತ್ರೀ ಶರೀರದಲ್ಲಿನ ಸ್ತ್ರೀತತ್ವವನ್ನೂ, ಆ ಶರೀರಗಳ ಪರಸ್ಪರ ಹೊಂದಾಣಿಕೆಯನ್ನು, ಡಿಜೈನ್ ಮಾಡಿರುವವನು ಮನುಷ್ಯ ಯಾವಮಾತ್ರವು ಅಲ್ಲವೆಂದು ಎಲ್ಲರಿಗು ತಿಳಿದಿದೆ. ಆದರೆ ಯಾರು ರೂಪಕಲ್ಪನೆ ಮಾಡಿದ್ದಾರೆನ್ನು ವುದು ಬಹಳಜನ ಭೌತಿಕ ಶಾಸ್ತ್ರಜ್ಞರಿಗು ಸಹ ತಿಳಿದಿಲ್ಲ. ಬ್ರಹ್ಮವಿದ್ಯಾ ಶಾಸ್ತ್ರವನ್ನು ತಿಳಿದವರು ಮಾತ್ರ, ಆ ಶಾಸ್ತ್ರ ಪ್ರಮಾಣದಿಂದ ಮನುಷ್ಯನನ್ನು ರೂಪಕಲ್ಪನೆ (ಡಿಜೈನ್) ಮಾಡಿರುವುದು ದೇವರೇ ಎಂದು ಹೇಳುತ್ತಿದ್ದಾರೆ. ಮನುಷ್ಯ ತಯಾರಾದ ನಂತರ ತನ್ನ ತಿಳಿವಳಿಕೆಯನ್ನುಪಯೋಗಿಸಿ ಜೀವವಿಲ್ಲದ ಎಷ್ಟೋ ಆಕಾರಗಳನ್ನು, ಯಂತ್ರಗಳನ್ನು ರೂಪಕಲ್ಪನೆ ಮಾಡಿದ್ದಾನೆ. ಮನುಷ್ಯ ಎಷ್ಟು ಓದು ಓದಿದರು, ಎಷ್ಟು ವಿಜ್ಞಾನವನ್ನು ಸಂಪಾದಿಸಿಕೊಂಡರು, ಎಷ್ಟು ಮೇಧಾ ವಿಯಾದರೂ ಜೀವವಿರುವ ಯಾವುದನ್ನು ತಯಾರು ಮಾಡಲಾರನು. ಇಲ್ಲಿ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಮನುಷ್ಯ ಮತ್ತೊಬ್ಬ ಮನುಷ್ಯನನ್ನು ತಯಾರು ಮಾಡದೆ ಹೋದರೂ, ಮನುಷ್ಯನಂತಹ ಚಲನೆಗಳಿರುವ ಆಕಾರವಿರುವ ರೋಬೋಟ್ ಎನ್ನುವ ಮರುಮನುಷ್ಯನನ್ನು ತಯಾರು ಮಾಡಿದ್ದಾನಲ್ಲ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ! ಮನುಷ್ಯ, ಮನುಷ್ಯನಂತಹ ರೋಬೋಟ್ ತಯಾರು ಮಾಡಿದ್ದಾನೆ, ಆದರೆ ಮನುಷ್ಯನನ್ನು ತಯಾರು ಮಾಡಲಿಲ್ಲ ಅಲ್ಲವೆ! ಭವಿಷ್ಯತ್ತಿನಲ್ಲಿ ಯಾವಾಗಲಾದರೂ ಮನುಷ್ಯ ತನ್ನ ಮೇಧಾಶಕ್ತಿಯಿಂದ ಜೀವ ಪದಾರ್ಥವನ್ನು ಕಂಡುಕೊಂಡಿದ್ದೇ ನೆಂದು ಪ್ರಚಾರ ಮಾಡಿಕೊಂಡರೂ, ಅದು ಸಂಪೂರ್ಣ ಜೀವವಲ್ಲವೆಂದು ಹೇಳಬಹುದು. ಸಂಪೂರ್ಣ ಜೀವ ಎಂದರೆ ಜೀವಕ್ಕೆ ಪಕ್ಕದಲ್ಲಿ ಆತ್ಮವಿರಬೇಕು.

ಎಲ್ಲಿ ಜೀವವಿರುತ್ತದೊ, ಅಲ್ಲಿ ಆತ್ಮ ಇರುತ್ತದೆನ್ನುವುದು ಶಾಸನ. ಆತ್ಮವಿಲ್ಲದೆ ಯಾವುದು ಜೀವ ಅನ್ನಲ್ಪಡುವುದಿಲ್ಲ. ಆತ್ಮ ಎಂದರೆ ಏನೊ ಇಲ್ಲಿಯವರೆಗು ಅದ್ವೈತರಿಗೂ, ವಿಶಿಷ್ಟಾದ್ವೈತರಿಗೂ, ದ್ವೈತರಿಗೂ, ಪೂರ್ವದಲ್ಲಿದ್ದ ಮಹರ್ಷಿಗಳಿಗು ಸಹ ತಿಳಿದಿಲ್ಲ. ಇಲ್ಲಿಯವರೆಗು ಯಾರು ಬೋಧಿಸಿದರೂ, ಯಾವ ಮಹರ್ಷಿಗಳು ಬೋಧಿಸಿದರೂ ಪರಮಾತ್ಮ, ಜೀವಾತ್ಮರನ್ನು ಕುರಿತು ಹೇಳಿದ್ದಾರೆ ಆದರೆ ಆತ್ಮವನ್ನು ಕುರಿತು ಯಾರೂ ಹೇಳಲಿಲ್ಲ. ಆದ್ದರಿಂದ ಆತ್ಮ ಅಗಮ್ಯಗೋಚರವಾಗಿ ಯಾರಿಗು ತಿಳಿಯದಾಗಿದೆ. ಒಂದೇ ಒಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೊರತು ಬೇರೆ ಯಾರೂ ಆತ್ಮವನ್ನು ಕುರಿತು ಹೇಳಿಲ್ಲ. ಭಗವದ್ಗೀತೆಯಲ್ಲಿ ಹೇಳಿರುವ ಆತ್ಮ ಯಾರಿಗೂ ಈಗಲೂ ಅರ್ಥವಾಗಿಲ್ಲ. ಆತ್ಮವೆಂದರೆ ಏನೋ ತಿಳಿಯದೇ ಆತ್ಮ ಆಧೀನದಲ್ಲಿರುವ ಜೀವಾತ್ಮನನ್ನು ಕಂಡುಕೊಳ್ಳುವುದು ಅಸಾಧ್ಯವೆಂದು ಹೇಳಬಹುದು. ಆದ್ದರಿಂದ ಯಾವ ಶಾಸ್ತ್ರಜ್ಞನಾದರೂ ಆತ್ಮವಿರುವ ಜೀವಾತ್ಮವನ್ನು ಕಂಡುಕೊಳ್ಳಲಾರನೆಂದು, ಜೀವಾತ್ಮವನ್ನು ತಯಾರು ಮಾಡಲಾರ ನೆಂದು ಹೇಳಬಹುದು.

ಸೂಕ್ಷ್ಮರೂಪದಲ್ಲಿರುವ ಆತ್ಮವನ್ನು, ಅದರ ಅಧೀನದಲ್ಲಿರುವ ಜೀವಾತ್ಮವನ್ನು ತಯಾರು ಮಾಡಿ, ಸೂಕ್ಷ್ಮವಾದ ಜೋಡಿ ಆತ್ಮಗಳು ನಿವಾಸಿಸುವುದಕ್ಕೆ ಸ್ಥೂಲವಾದ ಶರೀರವನ್ನು ಡಿಜೈನ್ ಮಾಡಿ ತಯಾರು ಮಾಡಿದವರು ದೇವರೊಬ್ಬನೇ. ಕಾಣಿಸದ ಆತ್ಮ, ಜೀವಾತ್ಮಗಳನ್ನು ಕಾಣಿಸದವನೇ ಮಾಡಿದ್ದಾನೆ. ಆ ಕಾಣದಿರುವ ವನೇ ದೇವರು. ಇದು ಶಾಸ್ತ್ರಾಧಾರವಿಲ್ಲದ ಮಾತು ಎಂದು ನಾಸ್ತಿಕರು ತೆಗೆದುಹಾಕಬಹುದು. ಆದರೆ ಸಜೀವವಾದ ಮನುಷ್ಯ ಪ್ರತ್ಯಕ್ಷ ಪ್ರಮಾಣವಾಗಿ ಇರುವಾಗ, ಶಾಸ್ತ್ರ ಪ್ರಮಾಣವಿಲ್ಲದ ಮಾತು ಅನ್ನುವುದೇನೆಂದು ನಾವು ಪ್ರಶ್ನಿಸುತ್ತೇವೆ. ಒಬ್ಬ ಮನುಷ್ಯ ಹುಟ್ಟಬೇಕೆಂದರೆ ಸ್ತ್ರೀ ಪುರುಷ ಸಂಯೋಗದಿಂದ ನಡೆಯುತ್ತದೆಂದು, ಪುರುಷ ವೀರ್ಯಕಣವು, ಸ್ತ್ರೀ ಅಂಡವು ಬೆರೆತಾಗಲೆ ಮನುಷ್ಯ ಹುಟ್ಟುತ್ತಿದ್ದಾನೆಂದು ಹೇಳುವ ಶಾಸ್ತ್ರಜ್ಞರು ಕೆಲವು ಕೋಟಿ ವರ್ಷಗಳ ಕೆಳಗೆ ಮನುಷ್ಯರು ಇರಲಿಲ್ಲವೆಂದು ಹೇಳುತ್ತಿದ್ದಾರಲ್ಲ!

ಆಗ ಸ್ತ್ರೀ ಪುರುಷರು ಇಲ್ಲದಿರುವಾಗ ಮನುಷ್ಯ ಹೇಗೆ ಹುಟ್ಟಿದ್ದಾನೆ ಹೇಳುತ್ತೀರಾ? ಹೇಳುವುದಿಲ್ಲ. ಪರಿಣಾಮ ಸಿದ್ಧಾಂತವೆನ್ನುವ ಹಾಡು ಮೊದಲಿಟ್ಟರೆ ಯಾವ ಪರಿಣಾಮವಿಲ್ಲದ ಈ ಕಾಲದಲ್ಲಿ ಆ ಹಾಡು ಶೃತಿ ಇಲ್ಲದ್ದಾಗುತ್ತದೆ. ಆದ್ದರಿಂದ ಒಂದು ಬ್ರಹ್ಮವಿದ್ಯಾ ಶಾಸ್ತ್ರ ತಿಳಿದವನು ಮಾತ್ರವೇ ಎಲ್ಲದಕ್ಕೂ ಉತ್ತರ ಹೇಳುವನು. ಈಗಿನ ಕಾಲದಲ್ಲಿ ಬ್ರಹ್ಮವಿದ್ಯೆ ಒಂದು ಶಾಸ್ತ್ರವೆನ್ನುವ ವಿಷಯವು ಸಹ ಉಳಿದ ಶಾಸ್ತ್ರಜ್ಞರಿಗೆ ತಿಳಿಯದು.

ಶಾಸ್ತ್ರ ಎಂದರೆ ಶಾಸನಗಳಿಂದ ಕೂಡಿಕೊಂಡಿರುವುದೆಂದು ಅರ್ಥ. ಕೆಲವು ಶಾಸನಗಳನ್ನು ಸಮಕೂರಿಸಿ ಶಾಸ್ತ್ರವನ್ನು ತಯಾರು ಮಾಡಿದವನು ಶಾಸ್ತ್ರಕರ್ತ. ಮೊದಲು ಶಾಸ್ತ್ರಕರ್ತನಿಂದ ತಯಾರು ಮಾಡಿದ ಶಾಸ್ತ್ರವನ್ನು ನಂತರ ತಿಳಿದುಕೊಂಡವರು ಎಷ್ಟುಜನರಾದರು ಇರಬಹುದು. ಶಾಸ್ತ್ರವನ್ನು ತಿಳಿದವರನ್ನು ಶಾಸ್ತ್ರಜ್ಞರೆಂದು ಅನ್ನುತ್ತಿದ್ದೇವೆ. ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ ಶಾಸ್ತ್ರಕರ್ತ ಬೇರೆ, ಶಾಸ್ತ್ರಜ್ಞ ಬೇರೆಯೆಂದು ನೆನಪಿಟ್ಟು ಕೊಳ್ಳಬೇಕು. ಭೂಮಿಮೇಲೆ ಷಟ್‌ಶಾಸ್ತ್ರಗಳು ಮಾತ್ರವೆ ಇವೆ. ಪ್ರತಿ ಶಾಸ್ತ್ರದ ಹಿಂದೆ ಶಾಸ್ತ್ರಕರ್ತ ಒಬ್ಬನಿರುತ್ತಾನೆ. ಆರು ಶಾಸ್ತ್ರಗಳನ್ನು ಎರಡಾಗಿ ವಿಭಜಿಸಿ ಹೇಳಿಕೊಳ್ಳಬಹುದು. ಒಂದು ಪ್ರಪಂಚಕ್ಕೆ ಸಂಬಂಧಿಸಿದ ಶಾಸ್ತ್ರಗಳೆಂದು, ಎರಡು ಪರಮಾತ್ಮನಿಗೆ ಸಂಬಂಧಿಸಿದ ಶಾಸ್ತ್ರಗಳೆಂದು ವಿಭಜಿಸಬಹುದು. ಹಾಗೆ ವಿಭಜಿಸಿ ನೋಡಿದರೆ ಐದು ಶಾಸ್ತ್ರಗಳು ಪ್ರಪಂಚಕ್ಕೆ ಸಂಬಂಧಿಸಿರುವವೆಂದು, ಒಂದು ಮಾತ್ರ ಪರಮಾತ್ಮನಿಗೆ ಸಂಬಂಧಿಸಿರುವುದೆಂದು ತಿಳಿಯುತ್ತದೆ. ಪ್ರಪಂಚಕ್ಕೆ ಸಂಬಂಧಿಸಿದ ಐದು ಶಾಸ್ತ್ರಗಳನ್ನು, ಮನುಷ್ಯರಿಗೆ ಊಹೆಯನ್ನೊದಗಿಸಿ ಮನುಷ್ಯರಿಂದಲೇ ದೇವರು ತಯಾರು ಮಾಡಿಸಿದ್ದಾನೆ. ಒಂದು ಬ್ರಹ್ಮವಿದ್ಯಾ ಶಾಸ್ತ್ರವನ್ನು ಮಾತ್ರ ದೇವರೆ ಸ್ವತಃವಾಗಿ ತಯಾರು ಮಾಡಿದ್ದಾನೆ. ಆ ವಿಧದಲ್ಲಿ ಹೊರಬಂದಿರುವ ಆರು ಶಾಸ್ತ್ರಗಳು ಇಂದಿಗೂ ಇವೆ. ಪ್ರಪಂಚ ಸಂಬಂಧ ಐದು ಶಾಸ್ತ್ರಗಳು ಕ್ರಮವಾಗಿ 1) ಗಣಿತ ಶಾಸ್ತ್ರ, 2) ರಸಾಯನಿಕ ಶಾಸ್ತ್ರ, 3) ಭೌತಿಕ ಶಾಸ್ತ್ರ, 4) ಖಗೋಳ ಶಾಸ್ತ್ರ, 5) ಜ್ಯೋತಿಷ್ಯ ಶಾಸ್ತ್ರ. ಈ ಐದಕ್ಕಿಂತ

ದೊಡ್ಡದು ಬ್ರಹ್ಮವಿದ್ಯಾ ಶಾಸ್ತ್ರ. ಬ್ರಹ್ಮ ಎಂದರೆ ದೊಡ್ಡ ಎಂದು ಅರ್ಥ. ಬ್ರಹ್ಮವಿದ್ಯಾ ಎಂದರೆ ದೊಡ್ಡ ವಿದ್ಯೆ ಎಂದು ಅರ್ಥ. ಎಲ್ಲದಕ್ಕಿಂತ ದೊಡ್ಡದಾಗಿರುವ ದೇವರನ್ನು ಕುರಿತು ತಿಳಿಸುವ ಶಾಸ್ತ್ರವಾಗಿರುವುದರಿಂದ ಅದನ್ನು ಬ್ರಹ್ಮವಿದ್ಯಾ ಶಾಸ್ತ್ರ ಎಂದು ಎನ್ನುತ್ತಿದ್ದೇವೆ. ಈ ಶಾಸ್ತ್ರವನ್ನು ಸ್ವತಃವಾಗಿ ದೇವರೆ ಹೇಳಿದ್ದಾನೆಂದು ಹೇಳಿದ್ದೇವೆ. ಒಂದು ಸಮಯದಲ್ಲಿ ಎಲ್ಲರಿಗು ತಿಳಿದ ಬ್ರಹ್ಮವಿದ್ಯಾ ಶಾಸ್ತ್ರವು, ಈ ದಿನ ಯಾರಿಗು ತಿಳಿಯದೆ ಹೋಗಿರುವುದಲ್ಲದೆ ಈಗ ನಾವು ಹೇಳಿದರೂ ಅರ್ಥಮಾಡಿಕೊಳ್ಳದ ಸ್ಥಿತಿಯಲ್ಲಿ ಮನುಷ್ಯರಿದ್ದಾರೆ.

ಎಲ್ಲದಕ್ಕಿಂತ ದೊಡ್ಡದಾಗಿರುವುದು, ಎಷ್ಟೋ ತಿಳುವಳಿಕೆ ಇದ್ದರಾಗಲಿ ಅರ್ಥವಾಗದೆ ಇರುವ ಬ್ರಹ್ಮವಿದ್ಯಾ ಶಾಸ್ತ್ರವನ್ನು ಮೊದಲು ತಿಳಿಸಿದವನು ದೇವರೇಯೆಂದು ತಿಳಿದುಕೊಂಡಿದ್ದೇವೆ. ದೇವರು ಎಂದರೆ ಯಾರಿಗು ತಿಳಿಯದವನೆಂದು ಅರ್ಥ. ಯಾರಿಗು ತಿಳಿಯದವನು, ಮನುಷ್ಯರಿಗೆ ತಿಳಿಯುವ ಹಾಗೆ ಬಂದು, ವಿವರವಾಗಿ ಹೇಳಿದಾಗ ಮನುಷ್ಯರಿಗೆ ಅರ್ಥವಾಗುತ್ತದೆ. ಆದುದರಿಂದ ದೇವರು ಮನುಷ್ಯನ ರೂಪದಲ್ಲಿ ಬಂದಾಗ ಅವನನ್ನು ಗುರು ಅನ್ನುತ್ತಿದ್ದೇವೆ. ಗುರು ಸಾಕ್ಷಾತ್ತು ದೇವರೆ ಆಗುವನು. ಕಾಣಿಸದ ದೇವರು ಕೆಲವು ಲಕ್ಷಗಳ, ಸಾವಿರ ವರ್ಷಗಳಿಗೊಮ್ಮೆ ಕಾಣಿಸುವ ಮನುಷ್ಯನಾಗಿ ಬಂದು ಬ್ರಹ್ಮವಿದ್ಯೆಯನ್ನು ಹೇಳಬೇಕಾಗಿರುತ್ತದೆ. ಏಕೆಂದರೆ! ಇದು ದೊಡ್ಡ ವಿದ್ಯೆ ಆದ್ದರಿಂದ ಈ ವಿದ್ಯೆ ಒಂದುಬಾರಿ ಹೇಳಿದರೆ ಶಾಶ್ವತವಾಗಿ ತಿಳಿದಿರುವುದಿಲ್ಲ. ಇದರಿಂದ ಕೆಲವು ಲಕ್ಷ ವರ್ಷಗಳಿಗೊ, ಕೆಲವು ಸಾವಿರ ವರ್ಷಗಳಿಗೊ ಯಾವಾಗ ತನ್ನ ಶಾಸ್ತ್ರ ಭೂಮಿಮೇಲೆ ತಿಳಿಯದ ಹಾಗೆ ಹೋದರೆ, ಆಗ ಭೂಮಿ ಮೇಲೆ ಗುರು ಬಂದು ಹೇಳಬೇಕಾಗಿರುತ್ತದೆಂದು ತಿಳಿಯುತ್ತದೆ. ಹಾಗೆ ಗುರು ಅಗತ್ಯವಿರುವ ಸಮಯಗಳಲ್ಲಿ ಮಾತ್ರ ಭೂಮಿ ಮೇಲೆ ಬರುತ್ತಾನೆಂದು, ಯಾವಾಗಲೂ ಭೂಮಿ ಮೇಲೆ ಗುರುವಿರುವುದಿಲ್ಲವೆಂದು ತಿಳಿಯುತ್ತದೆ. ಇಲ್ಲಿ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದು ಏನೆಂದರೆ! ಈ ದಿನ ಭೂಮಿ ಮೇಲೆ ಎಷ್ಟೋ ಜನ ಗುರುಗಳಿದ್ದಾರಲ್ಲವೆ! ನೀವು ಹೇಳುವ ಪ್ರಕಾರ ಇವರೆಲ್ಲರು ಗುರುಗಳು

ಅಲ್ಲವೆ! ಯಾವಾಗಲೊ ಒಂದು ಬಾರಿ ಬರುವವನು ಒಬ್ಬನೇ ಗುರುವಾದರೆ, ಈ ದಿನ ನೂರು ಸಂಖ್ಯೆಗಳಲ್ಲಿರುವ ಗುರುಗಳನ್ನೆಲ್ಲ ಏನನ್ನಬೇಕು? ಎಂದು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಎಂದಿಗಾದರೂ ಭೂಮಿಮೇಲೆ ಇದ್ದರೆ ಒಬ್ಬ ಗುರುವಿರುತ್ತಾನೆ. ಅದೂ ಲಕ್ಷ ವರ್ಷಗಳಿಗೊಂದು ಬಾರಿ ಮಾತ್ರವೆ. ಎಲ್ಲ ಕಾಲದಲ್ಲಿ ಭೂಮಿಮೇಲೆ ಗುರು ಇರುವುದಿಲ್ಲ. ಎಲ್ಲ ವೇಳೆಯಲ್ಲು ಇದ್ದಾರೆ, ಬಹಳ ಜನ ಇದ್ದಾರೆ ಅಂದರೆ ಅವರು ಗುರುಗಳಲ್ಲ. ಗುರುಗಳು ಬಹುವಚನದಲ್ಲಿ ಇರುವುದಿಲ್ಲ. ಈಗಿರುವ ಗುರುಗಳೆನ್ನುವವರು ಗುರುಗಳಲ್ಲ ಬೋಧಕರೆಂದು ಹೇಳಬಹುದು. **ಶಾಸ್ತ್ರಕರ್ತ, ಶಾಸ್ತ್ರಜ್ಞ ಎಂದು ಎರಡು ವಿಧಗಳಿದ್ದಹಾಗೆ ಬ್ರಹ್ಮವಿದ್ಯಾ ಶಾಸ್ತ್ರಕರ್ತ ಗುರುವಾದರೆ, ಅದನ್ನು ತಿಳಿದು ಹೇಳಿಕೊಳ್ಳುವವರು ಶಾಸ್ತ್ರಜ್ಞರಾದ ಬೋಧಕರೆಂದು ಹೇಳಬಹುದು**. ಇದರಿಂದ ಗುರು ಬೇರೆ ಬೋಧಕನು ಬೇರೆಯೆಂದು ತಿಳಿಯುತ್ತದೆ.

ಗುರು ಎಂದರೆ, ಸಾಧಾರಣ ಮನುಷ್ಯನಲ್ಲ ಎಂದು ತಿಳಿದ ಕೆಲವರು ಜ್ಞಾನಿಗಳು, ಗುರುವನ್ನು ದೈವಸಮಾನವಾಗಿಯೆ ಭಾವಿಸುತ್ತಿದ್ದರು. ಭೂಮಿಮೇಲೆ ಗುರು ಎನ್ನುವ ಹೆಸರಿಲ್ಲದ ಪ್ರಾಚೀನ ಕಾಲದಲ್ಲಿ, ಮೊದಲು ಜ್ಞಾನವನ್ನು ತಿಳಿಸಿದ ಮನುಷ್ಯನನ್ನು ದೇವರೆಂದು ಗುರ್ತಿಸಿದವರು ಜ್ಞಾನವಿರುವ ಮನುಷ್ಯರು, ಆತನನ್ನು ಯಾವ ಹೆಸರಿನಿಂದ ಕರೆಯಬೇಕೆಂದು ಯೋಚಿಸಿ, ಕೊನೆಗೆ ಅರ್ಥವಾಗದೆ, ನಿನ್ನನ್ನು ಏನೆಂದು ಸಂಭೋದಿಸಬೇಕೆಂದು ಆತನನ್ನೇ ಕೇಳಿದರು. ಆಗ ಬ್ರಹ್ಮವಿದ್ಯೆಯನ್ನು ಬೋಧಿಸಿ ಆತನು ಹೇಳಿದ ಹೆಸರೇ **"ಗುರು"**. ಈ ವಿಧದಲ್ಲಿ ಮೊದಲು ಭೂಮಿಮೇಲೆ **"ಗುರು"** ಎನ್ನುವ ಪದ ಹೊರಗೆ ಬಂದಿದೆ. ಮೊದಲು ಬ್ರಹ್ಮ ವಿದ್ಯೆಯನ್ನು ತಿಳಿಸಿದವನು ಸಾಮಾನ್ಯನು ಅಲ್ಲವೆಂದು ತಿಳಿದವರು, ಆತನಿಂದಲೆ ಹೇಳಲಾದ ಗುರು ಅನ್ನುವ ಪದವು ಸಹ ವಿಶೇಷ ಅರ್ಥದಿಂದ ಕೂಡಿಕೊಂಡಿದೆಯೆಂದು ತಿಳಿದವರಾಗಿ ಗುರು ಅನ್ನುವ ಪದಕ್ಕೆ ಅರ್ಥವನ್ನು ಹೇಳಬೇಕೆಂದು, ನೀವಲ್ಲದೆ ಯಾರು ಆ ಶಬ್ಧಕ್ಕೆ ಅರ್ಥ ಹೇಳುವುದಿಲ್ಲವೆಂದು ಕೋರಿದರು. ಆಗ ತನ್ನ ಹೆಸರು **"ಗುರು"**ವೆಂದು ಪ್ರಕಟಿಸಿಕೊಂಡ ಭಗವಂತನು

***"ಗುಕಾರಸ್ಯ ಗುಣಾತೀತಃ, ರುಕಾರೋ ರೂಪವರ್ಜಿತಮ್"*** ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಮತ್ತೊಂದು ವಿಷಯವನ್ನು ಸಹ ಹೇಳಿದ್ದಾನೆ. **"ನನ್ನನ್ನು ಕುರಿತು ನಾನು ಹೆಚ್ಚಿನದಾಗಿ ಹೇಳಿಕೊಳ್ಳುವುದಿಲ್ಲ. ನೀವು ಕೇಳಿರುವುದರಿಂದ ಎರಡಕ್ಷರಗಳಿಗೆ ಸೂಚನೆಯಾಗಿ ಅರ್ಥವನ್ನು ಹೇಳಿದ್ದೇನೆ. ಈ ಎರಡಕ್ಷರಗಳಲ್ಲಿ ಇನ್ನೂ ವಿಶೇಷವಾದ ಅರ್ಥ ಕೂಡಿಕೊಂಡಿದೆ. ನೀವು ಶ್ರದ್ಧೆಯಿಂದ ನಾನು ಹೇಳಿದ ಜ್ಞಾನವನ್ನು ಎಷ್ಟರಮಟ್ಟಿಗೆ ತಿಳಿದುಕೊಳ್ಳುತ್ತೀರೊ, ಅಷ್ಟರ ಮಟ್ಟಿಗೆ ಗುರು ಪದದಲ್ಲಿನ ರಹಸ್ಯ ತಿಳಿಯುತ್ತದೆ."** ಎಂದಿದ್ದಾನೆ. ಇದರಿಂದ ಜ್ಞಾನಿಗಳೆಲ್ಲರಿಗು ಒಂದು ಓಟದ ಪಂದ್ಯವನ್ನು ಇಟ್ಟಹಾಗಾಗಿದೆ. ಗುರು ಪದದ ಅರ್ಥಕ್ಕಾಗಿ ಓಟವನ್ನು ಪ್ರಾರಂಭಿಸಿದರು. ಆಗಿನಿಂದ ಬ್ರಹ್ಮವಿದ್ಯೆಯನ್ನು ತಿಳಿದುಕೊಂಡ ಜ್ಞಾನಿಗಳೆಲ್ಲರು ಗುರು ಪದಕ್ಕೆ, ಅನೇಕ ವಿಧಗಳಲ್ಲಿ ಅರ್ಥವನ್ನು ಹೇಳುತ್ತಾ ಬಂದಿದ್ದಾರೆ. ಅವರವರ ಜ್ಞಾನವನ್ನು ಅನುಸರಿಸಿ, ಎಷ್ಟೋ ಜನ ಜ್ಞಾನಿಗಳು ಗುರುವನ್ನು ಕುರಿತು ವರ್ಣಿಸುತ್ತಾ ಸಂಸ್ಕೃತದಲ್ಲಿ ಎಷ್ಟೊ ಶ್ಲೋಕಗಳನ್ನು ಸಹ ಹೇಳಿದ್ದಾರೆ. ಹಾಗೆ ಎಷ್ಟೋ ಜನ ಜ್ಞಾನಿಗಳು ಹೇಳಿದ ಅರ್ಥಗಳೆಲ್ಲವು ಬಹಳ ದೊಡ್ಡವೆಂದು ಹೇಳಬಹುದು.

ಈಗ ನಾವು ಸಹ ಬ್ರಹ್ಮವಿದ್ಯೆಯನ್ನು ಕಲಿತಿರುವವರೆ, ಆದುದರಿಂದ ನಾವು ಸಹ **ಗುರು** ಪದದ ಅರ್ಥಕ್ಕಾಗಿ ಓಡುವ ಪಂದ್ಯದಲ್ಲಿ ಪಾಲ್ಗೊಳ್ಳಬಹುದು. ನಮಗೆ ಸಂಸ್ಕೃತ ಭಾಷೆ ಬರದಿದ್ದರೂ, ಶ್ಲೋಕಗಳ ರೂಪದಲ್ಲಿ ಹೇಳದಿದ್ದರೂ, ನಮಗೆ ಬರುವ ಕನ್ನಡ ಭಾಷೆಯಲ್ಲೇ ನಾವು **"ಗುರು"** ಪದಕ್ಕೆ ಅರ್ಥ ಹೇಳುವುದಕ್ಕೆ ಪ್ರಯತ್ನಿಸೋಣ. ಭೂಮಿಮೇಲೆ ಮನುಷ್ಯರಿಗೆ, ಶರೀರವಿರುವ ಮನುಷ್ಯನಿಂದಲೆ ಮೊದಲು ಬ್ರಹ್ಮವಿದ್ಯೆ ತಿಳಿದಿದೆ. ಜ್ಞಾನವನ್ನು ತಿಳಿದ ಆ ಮನುಷ್ಯ ಗುಣಗಳಿರುವವನೇ. ಗುಣಗಳಿಲ್ಲದ ಮನುಷ್ಯ ಭೂಮಿಮೇಲೆ ಇರುವುದಿಲ್ಲ ಎನ್ನುವ ಸೂತ್ರದ ಪ್ರಕಾರ ಗುರು ಸಹ ಗುಣಗಳಿರುವವನೇ. ಗುಣಗಳಿಗೆ ಮತ್ತೊಂದು ಹೆಸರು **"ಮಾಯೆ"** ಎಂದು ಭಗವದ್ಗೀತೆಯಲ್ಲಿ ತಿಳಿದುಕೊಂಡಿದ್ದೇವೆ. ***"ಗುಣಮಯೀ ಮಮ ಮಾಯಾ"*** ಎನ್ನುವ ಗೀತಾವಾಕ್ಯದ ಪ್ರಕಾರ

ಶರೀರದಿಂದಿರುವ ಗುರುವಿಗು ಸಹ ಗುಣಗಳಿವೆಯೆಂದು ತಿಳಿಯುತ್ತದೆ. ಗುರು ಸಹ ಗುಣಗಳ ಪ್ರಕಾರವೇ ಕೆಲಸ ಮಾಡುತ್ತಿರುವನು. ಆದರೆ ***"ಗುಕಾರಸ್ಯ ಗುಣಾತೀತಃ"*** ಎನ್ನುವ ಹಾಗೆ ಗುರು ಎನ್ನುವ ಪದದಲ್ಲಿ **"ಗು"** ಅಕ್ಷರ ಅರ್ಥದ ಪ್ರಕಾರ, ಬ್ರಹ್ಮ ವಿದ್ಯಾ ಶಾಸ್ತ್ರವನ್ನು ತಿಳಿಸಿದವನು ಗುಣಾತೀತನೆಂದು ತಿಳಿಯುತ್ತದೆ. ನಂತರ ಗುರು ಪದದಲ್ಲಿ ಎರಡನೆ ಅಕ್ಷರಕ್ಕೆ **"ರುಕಾರೊ ರೂಪವರ್ಜಿತಮ್"** ಎಂದಿದ್ದಾರೆ. ಅದರ ಪ್ರಕಾರ ಗುರುವಿಗೆ ರೂಪವಿದ್ದರೂ ರೂಪವಿಲ್ಲದವನೆಂದು ತಿಳಿಯುತ್ತದೆ. ಗುಣಗಳಿದ್ದರೂ, ಗುಣಗಳಿಗೆ ಅತೀತನೆಂದು, ರೂಪವಿದ್ದರೂ, ರೂಪವಿಲ್ಲದವನೆಂದು ಮೊದಲು ಗುರುವೇ ತನ್ನ ವಿಧಾನವನ್ನು ತಿಳಿಸಿದ್ದಾನೆ. ಇದು ನಾವು ಹೇಳಿದ ಅರ್ಥವಲ್ಲದೆ ಹೋದರೂ, ಮನುಷ್ಯನಾಗಿ ಇರುವಾಗ ಮನುಷ್ಯರು ಕೇಳಿರುವುದಕ್ಕು ಗುರು ಪದಕ್ಕು ಆತನೇ ಅರ್ಥ ಹೇಳಿದರೂ, ಇದು ಸ್ವಲ್ಪಮಾತ್ರವೆ ಅರ್ಥವೆಂದು, ಗುರು ಅನ್ನುವ ಎರಡಕ್ಷರಗಳಲ್ಲಿ ಇನ್ನೂ ವಿಶೇಷ ಅರ್ಥ ವಿದೆಯೆಂದು, ಅದನ್ನು ನಿಮ್ಮ ಜ್ಞಾನದಿಂದ ತಿಳಿದುಕೊಳ್ಳಿರೆಂದು ಸಹ ಹೇಳಿದ್ದಾನೆ. ಆತನು ಹೇಳಿದ ಹಾಗೆ, ನಮಗಿರುವ ಜ್ಞಾನದಿಂದ ಪರಿಶೀಲಿಸಿದರೆ ಸ್ವಲ್ಪ ನಿಗೂಢ ಅರ್ಥ ತಿಳಿಯುತ್ತದೆ, ಅದೇನೆಂದರೆ!

ದೇವರು ನಿರಾಕಾರನು ಮತ್ತು ಸಾಕಾರನು. ನಿರಾಕಾರವಾದ ದೇವರು ರೂಪವಿಲ್ಲದವನು, ಸಾಕಾರವಾದ ಭಗವಂತನು ರೂಪವಿರುವವನು ಮತ್ತು ಗುಣಗಳಿರುವವನು. ಇದರಿಂದ ದೇವರು ಎರಡು ವಿಧಗಳಾಗಿ ಇದ್ದಾನೆಂದು ತಿಳಿಯುತ್ತದೆ. ಭಗದಿಂದ ಹುಟ್ಟಿ ಭಗವಂತನಾದವನು ಗುಣಗಳಿಂದಲೆ ಚರಿಸುತ್ತಿದ್ದಾನೆ. ಅಂತಹ ಭಗವಂತನಿಂದಲೆ ಭೂಮಿಮೇಲೆ ಮನುಷ್ಯ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದಾನೆ. ಆದುದರಿಂದ ಗುಣಗಳಲ್ಲಿ ಮೊದಲ ಅಕ್ಷರವಾದ **"ಗು"** ಎನ್ನುವುದನ್ನು ಭಗವಂತನ ಗುರುತಾಗಿ ಇಡಬೇಕಾಗಿ ಬಂದಿದೆ. ಭೂಮಿಮೇಲೆ ಮನುಷ್ಯನಾಗಿ ಗುಣಗಳಲ್ಲಿರುವ ಭಗವಂತನು, ನಂತರ ರೂಪವಿಲ್ಲದ ನಿರಾಕಾರನಾಗಿ ಬದಲಾಗಿ ಹೋಗುವನು. ರೂಪವಿಲ್ಲದ ದೇವರ ಗುರುತಾಗಿ ರೂಪದೊಳಗಿನ **"ರು"** ಎನ್ನುವ ಮೊದಲ ಅಕ್ಷರವನ್ನು **"ಗು"** ನಂತರ ಅಕ್ಷರವಾಗಿ

ಇಡಬೇಕಾಗಿ ಬಂದಿದೆ. ಹಾಗೆ ಎರಡು ಅಕ್ಷರಗಳನ್ನು ಸೇರಿಸಿ ನೋಡಿದರೆ **"ಗುರು"** ಆಗುತ್ತದೆ. ಗುರು ಎಂದರೆ ಗುಣಗಳಿರುವವನು, ರೂಪವಿಲ್ಲದವನು ಇಬ್ಬರೂ ಸೇರಿರುವುದೆಂದು ತಿಳಿಯುತ್ತದೆ. ಇಲ್ಲಿ ಯಾರಾದರು ಒಂದು ಪ್ರಶ್ನೆ ಕೇಳುವುದಕ್ಕೆ ಅವಕಾಶವಿದೆ. ಅದು ಏನೆಂದರೆ! ಮೊದಲು ರೂಪವಿಲ್ಲದ ನಿರಾಕಾರ ದೇವರು, ನಂತರ ಅಗತ್ಯವಿದ್ದಾಗ ಭೂಮಿಮೇಲೆ ಶರೀರದಿಂದ ಬಂದು ಜ್ಞಾನ ಹೇಳಿದ್ದಾನಲ್ಲ! ಹಾಗಿರುವಾಗ ಮೊದಲು ರೂಪವಿಲ್ಲದ ದೇವರ ಗುರುತಾಗಿ **"ರು"** ಎನ್ನುವ ಅಕ್ಷರವನ್ನು ಇಟ್ಟು ನಂತರ ಗುಣಗಳಿಂದ ಬಂದಿದ್ದಾನಾದ್ದರಿಂದ **"ರು"** ನಂತರ **"ಗು"** ಅನ್ನುವ ಅಕ್ಷರವನ್ನು ಇಟ್ಟು **"ರುಗು"** ಅನ್ನಬಹುದಲ್ಲ! ಆಗಲ್ಲದೆ ಮೊದಲು **"ಗು"** ನ್ನು ನಂತರ **"ರು"** ಅನ್ನು ಇಡುವುದರಲ್ಲಿ ಅರ್ಥವೇನು? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ.

ನಮಗೆ ಮೊದಲು, ಗುಣಗಳಿರುವ ಮನುಷ್ಯನ ಆಕಾರದಿಂದಲೆ ಜ್ಞಾನ ತಿಳಿದಿದೆ. ನಂತರ ಆ ಮನುಷ್ಯ ನಿರಾಕಾರ ಹೊಂದಿದ್ದಾನೆಂದು ಸಹ ತಿಳಿದಿದೆ. ಆದರೆ ನಾವು ಮೊದಲು **"ಗು"** ಎಂದು ನಂತರ **"ರು"** ಎಂದು ವರಸೆ ಇಟ್ಟುಕೊಂಡು **"ಗುರು"** ಅನ್ನಬೇಕೆ ಹೊರತು **"ರುಗು"** ಎನ್ನಬಾರದು. ದೇವರು ರೂಪವಿಲ್ಲದವನೆ ಆದರೆ ಮೊದಲು ನಮಗೆ ತಿಳಿದಿಲ್ಲ, ಆದ್ದರಿಂದ **"ರು"** ಅನ್ನು ಮೊದಲು ತೆಗೆದುಕೊಳ್ಳಬಾರದು. ಜ್ಞಾನ ತಿಳಿದ ನಂತರ ಜ್ಞಾನ ಹೇಳಿದವನು ದೇವರೆಂದು, ಅವನು ನಿರಾಕಾರನೆಂದು ತಿಳಿದಿದೆ. ಆದ್ದರಿಂದ **"ಗು"** ನಂತರವೆ **"ರು"** ಅನ್ನು ಇಟ್ಟುಕೊಂಡು **"ಗುರು"** ಅನ್ನುವ ಶಬ್ಧವನ್ನು ಮಾತನಾಡಬೇಕಾಗುತ್ತದೆ. ಆದ್ದರಿಂದಲೆ ಪೂರ್ವದಿಂದ **"ಗುರು"** ಅನ್ನುವ ಶಬ್ದ ವರಸೆ ಕ್ರಮದಲ್ಲಿಯೆ ಇದೆ. ದೇವರ ಕಡೆಯಿಂದ ಹೇಳುವ ಮಾತಾದರೆ **"ರುಗು"** ಎಂದು ದೇವರು ಹೇಳಬೇಕು. ಮನುಷ್ಯರ ಕಡೆಯಿಂದ ಬರುವ ಮಾತಾದರೆ **"ಗುರು"** ಎಂದು ಹೇಳಬೇಕು. ನಾವು ಮನುಷ್ಯರೇ ಆದ್ದರಿಂದ ನಾವು ಹೇಳುವ ಮಾತು **"ಗುರು"**ವಾಗಿಯೇ ಇರಬೇಕು. ಇದನ್ನು ಅನುಸರಿಸಿ ಯೋಚಿಸಿ ನೋಡಿದರು **"ಗು"** ಎಂದರೂ, **"ರು"** ಎಂದರೂ, ಎರಡು ದೇವರನ್ನು ಉದ್ದೇಶಿಸಿ ಹೇಳುವವೆಯೆಂದು, ದೇವರು ಸಾಕಾರ, ನಿರಾಕಾರಗಳಾಗಿರುವುದರಿಂದ **"ಗುರು"**

ಶಬ್ದ ಎರಡು ಅಕ್ಷರಗಳಾಗಿ ಇದ್ದರೂ, ಎರಡು ಒಂದೇ ಎಂದು ತಿಳಿಯುತ್ತದೆ. ಮನುಷ್ಯರಾದ ನಾವು, ಮನುಷ್ಯನಾಗಿರುವ ಗುರುವಿನಿಂದ ಜ್ಞಾನವನ್ನು ತಿಳಿದುಕೊಂಡ ನಂತರ, ಕಾಣಿಸುವ ಗುರುವೇ ಕಾಣಿಸದ ದೈವವೆಂದು ನಮಗೆ ಅರ್ಥವಾಗುತ್ತದೆ. ಆ ವಿಧಾನವನ್ನು ತಿಳಿಸುವ ನಿಮಿತ್ತ ಮೊದಲು **"ಗು"** ನಂತರ **"ರು"** ಇದೆಯೆಂದು ತಿಳಿಯುತ್ತದೆ.

ದೈವ ಅಥವಾ ದೇವರು ಅನೇಕ ಅಂಶಗಳಿಂದ ವಿಶ್ವವ್ಯಾಪ್ತವಾಗಿ ಅಣುಅಣುವಿನಲ್ಲೂ ವ್ಯಾಪಿಸಿದ್ದಾನೆ. ವಿಶ್ವವ್ಯಾಪ್ತಿ ಆದ ದೇವರ ಅಂಶದಲ್ಲಿ ಸ್ವಲ್ಪ ಭಾಗ ಮಾತ್ರವೆ ಕಾಣಿಸುವ ಗುರುವಾಗಿ ಹುಟ್ಟುತ್ತಿದೆ. ಒಂದೇ ಸಮಯದಲ್ಲಿ ಭೂಮಿಯ ಮೇಲೆ ಗುರುವಾಗಿ ಹುಟ್ಟಿದ ಭಗವಂತನೂ ಇದ್ದಾನೆ ಮತ್ತು ವಿಶ್ವವ್ಯಾಪ್ತವಾಗಿ ದೇವರೂ ಇದ್ದಾನೆ. ಇದರಿಂದ ದೇವರು ಸಂಪೂರ್ಣನೆಂದು, ಭಗವಂತನು ದೇವರಲ್ಲಿನ ಸ್ವಲ್ಪ ಅಂಶವೇ ಆದ್ದರಿಂದ ಅಸಂಪೂರ್ಣನೆಂದು ತಿಳಿಯುತ್ತದೆ. ಕಾಣಿಸುವ ಗುರು ಶರೀರವನ್ನು ಬಿಟ್ಟುಹೋದರೆ ಗುರು ದೇವರೆ ಆಗುವನೆಂದು ತಿಳಿದುಕೊಂಡಿದ್ದೇವಲ್ಲವೆ! ಆಗ ಗುರು ಸಹ ಸಂಪೂರ್ಣ ನಾಗುತ್ತಾನೆ. ಇದನ್ನೇ ಇನ್ನೊಂದು ವಿಧದಲ್ಲಿ ಹೇಳಿಕೊಂಡರೆ ಗುರು ಜ್ಞಾನ ಹೇಳುವಾಗ ಅಸಂಪೂರ್ಣನು, ಹೇಳಿಹೋದ ನಂತರ ಸಂಪೂರ್ಣನು ಎಂದು ತಿಳಿಯುತ್ತದೆ. ಈ ವಿಧಾನವು ದೈವಜ್ಞಾನವನ್ನು ತಿಳಿದವರಿಗೆ ಮಾತ್ರ ಅನ್ವಯಿಶಸುತ್ತದೆ. ಜ್ಞಾನ ತಿಳಿಯದವರ ದೃಷ್ಟಿಯಲ್ಲಿ ಗುರು ಸತ್ತುಹೋದ ನಂತರ ಪೂರ್ತಿ ಬೆಲೆ ಇಲ್ಲದವನ ಕೆಳಗೆ ಜಮಕಟ್ಟುತ್ತಿದ್ದಾರೆ. ಜ್ಞಾನವಿರುವವನು ಜ್ಞಾನವಿಲ್ಲದವನು ಗುರುವನ್ನು ಹೇಗೆ ನೆನೆಸುತ್ತಾರೊ, ಜ್ಞಾನವಿರುವವರ ಹತ್ತಿರ ಗುರುವಿಗೆ ಎಷ್ಟು ಬೆಲೆ ಇದೆಯೋ, ಜ್ಞಾನ ಇಲ್ಲದವನ ಹತ್ತಿರ ಗುರುವಿಗೆ ಎಷ್ಟು ಬೆಲೆ ಇಲ್ಲವೊ, ಗುರು ಪದವನ್ನು ದೃಶ್ಯರೂಪದಿಂದ ನೋಡಿದರೂ, ನಮಗೆ ಅರ್ಥವಾಗುವ ಹಾಗೆ ಇದೆ. ಅದು ಹೇಗೆ ಅಂದರೆ!

ಕಾಣಿಸಿ ಜ್ಞಾನವನ್ನು ಹೇಳುವವನನ್ನು **"ಗು"** ಎನ್ನುವ ಅಕ್ಷರವಾಗಿ ಹೋಲಿಸಿಕೊಂಡಿದ್ದೇವೆ ತಾನೆ! ಜ್ಞಾನವನ್ನು ತಿಳಿದುಕೊಂಡ ಮನುಷ್ಯ ಜ್ಞಾನ

ಹೇಳುವವನಿಗೆ ಬೆಲೆ ಕೊಟ್ಟು ಗೌರವವಾಗಿ ನೋಡಿಕೊಂಡರೆ ದೃಶ್ಯರೂಪವಾಗಿರುವ **"ಗು"** ಅನ್ನುವ ಅಕ್ಷರಕ್ಕೆ ಕೆಳಗೆ ಅರ್ಧ ಸೊನ್ನೆ ಎನ್ನುವ ಬೆಲೆಯನ್ನು ಸೇರಿಸಿದಂತಾಗುತ್ತದೆ. ಎಂದರೆ **"ಗು"**ಗೆ ಕೆಳಗೆ ಅರ್ಧಸೊನ್ನೆಯನ್ನು ತಗುಲಿಸಿದರೆ **"ಗು"** ಅನ್ನುವ ದೃಶ್ಯ **"ರು"** ಅನ್ನುವ ದೃಶ್ಯವಾಗಿ ಬದಲಾಗುತ್ತದೆ. **"ರು"** ಅನ್ನುವ ದೃಶ್ಯ ದೇವರ ಗುರುತು ಆಗಿರುವುದರಿಂದ ಜ್ಞಾನಿ ಆದವನು, ಜ್ಞಾನ ಹೇಳಿದವನನ್ನು ದೇವರಾಗಿ ಗುರುತಿಸಿದ್ದಾನೆಂದು ಅರ್ಥವಾಗುತ್ತದೆ. ಮೊದಲು ದೇವರೇ ಮನುಷ್ಯನಾಗಿ (ಭಗವಂತನಾಗಿ) ಬಂದಿದ್ದಾನೆ ಆದ್ದರಿಂದ ಮೊದಲ ಅಕ್ಷರ **"ರು"** ಎಂದೆ ಅಂದುಕೊಂಡು, **"ರು"** ಎನ್ನುವುದಕ್ಕೆ ಕೆಳಗೆ ಅರ್ಧ ಸೊನ್ನೆಯನ್ನು ತೆಗೆದು ಹಾಕಿದರೆ **"ಗು"** ಅನ್ನುವ ದೃಶ್ಯ ಉಳಿದು ಹೋಗುತ್ತದೆ. **"ಗು"** ಭಗವಂತನ ಗುರುತಾದ್ದರಿಂದ ದೇವರು ಭಗವಂತನಾಗಿ ಬದಲಾಗಿದ್ದಾ ನೆಂದು ಅರ್ಥವಾಗುತ್ತದೆ. ಇನ್ನೊಂದು ವಿಧದಲ್ಲಿ "ಗು" ಅನ್ನು **"ರು"** ಮೇಲೆ ಇಟ್ಟರೂ, ಅಥವಾ **"ರು"** ಅನ್ನು **"ಗು"** ಮೇಲೆ ಇಟ್ಟರೂ ಎರಡು ಒಂದೆ "ರು" ದೃಶ್ಯವಾಗಿಯೆ ಕಾಣಿಸುತ್ತವೆ. ಇದರ ಅರ್ಥ ದೇವರು ಭಗವಂತನಾದರೂ, ಭಗವಂತನು ದೇವರಾದರೂ ಇಬ್ಬರೂ ಒಂದೇ ದೇವರೆಂದು ಒಂದೇ **"ರು"** ಕಾಣಿಸುತ್ತದೆ. ಹೇಳಿದ ಹಾಗೆ ಮಾಡಿ ನೋಡಿರಿ **"ಗುರು"**ನಲ್ಲಿ ಇರುವ ಮ್ಯಾಜಿಕ್ ಅರ್ಥವಾಗುತ್ತದೆ. **"ಗುರು"** ಎನ್ನುವ ಎರಡಕ್ಷರಗಳು ಒಂದರಲ್ಲೊಂದು ಸೇರಿಹೋಗಿ **"ರು"** ಆಗಿ ಕಾಣಿಸುತ್ತದೆಂದರೆ ಶಾಶ್ವತವಾದವನು ದೇವರೆಂದು, ಅವನೆ ತಾತ್ಕಾಲಿಕವಾಗಿ ಮನುಷ್ಯರೂಪದಲ್ಲಿ ಕಾಣಿಸಿ ಹೋಗುತ್ತಿದ್ದಾನೆಂದು ತಿಳಿಯುತ್ತದೆ. ಇದೆಲ್ಲವು ಜ್ಞಾನ ತಿಳಿದವರಿಗೆ ಮಾತ್ರವೇ ಗುರುವಿನ ಬೆಲೆ ತಿಳಿಯುತ್ತದೆಂದಿದ್ದೇವೆ ಅಲ್ಲವೆ! ಜ್ಞಾನ ತಿಳಿಯದ ಅಜ್ಞಾನಿಗಳ ದೃಷ್ಠಿಯಲ್ಲಿ **"ಗುರು"** ಎನ್ನುವವನು ನಿಷ್ಪ್ರಯೋಜಕನಾಗಿ, ವ್ಯರ್ಥನಾಗಿ, ಅರ್ಥಹೀನನಾಗಿ, ತೋಚುತ್ತಾನೆಂದಿದ್ದೇವಲ್ಲ! ಅದು ಹೇಗೆ ಎಂದರೆ! **"ಗು"** ಎನ್ನುವುದು ಕಾಣಿಸುವ ಭಗವಂತನಿಗೆ ಗುರುತೆಂದಿದ್ದೇವಲ್ಲವೆ! ದೃಶ್ಯರೂಪದಲ್ಲಿರುವ **"ಗು"** ಅನ್ನುವ ಅಕ್ಷರಕ್ಕೆ ಜ್ಞಾನಿಗಳು ವಿನಯವಾಗಿ ಕೆಳಗೆ ಅರ್ಧಸೊನ್ನೆಯನ್ನು ಸೇರಿಸಿ ನೋಡಿದರೆ,

ಅಜ್ಞಾನಿಗಳು ಗರ್ವದಿಂದ ಮೇಲೆ ತಲೆಕಟ್ಟನ್ನೆ ತೆಗೆದು ಹಾಕುತ್ತಿದ್ದಾರೆ. ಆಗ **"ಗು"** ಅನ್ನುವದು ತಲೆಯಿಲ್ಲದ ಆಕಾರ **" ಗು"** ವಕ್ರವಾಗಿ, ಅರ್ಥವಿಲ್ಲದಾಗಿ ವ್ಯರ್ಥವಾಗಿ ಕಾಣಿಸುತ್ತದೆ. ಇದನ್ನು ಅನುಸರಿಸಿ ಅಜ್ಞಾನಿಗಳ ದೃಷ್ಠಿಯಲ್ಲಿ ಕಾಣಿಸುವ ಭಗವಂತನು ಸಹ ವ್ಯರ್ಥವೇ. ಅದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗವೆನ್ನುವ ಅಧ್ಯಾಯದಲ್ಲಿ ಹನ್ನೊಂದನೆಯ ಶ್ಲೋಕದಲ್ಲಿ ಭಗವಂತನು ಈ ವಿಧದಲ್ಲಿ ಹೇಳಿದ್ದಾನೆ.

***ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನು ಮಾಶ್ರಿತಮ್,***
***ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್.***

**ಭಾವಾರ್ಥ** : ಸರ್ವ ಜೀವರಾಶಿಗಳಿಗೆ ಅಧಿಪತಿಯಾಗಿ, ದೇವರಾಗಿರುವ ನಾನು ಶರೀರವನ್ನು ಧರಿಸಿ ಮನುಷ್ಯನಾಗಿ ಹುಟ್ಟಿದರೆ, ನನ್ನನ್ನು ನೋಡಿದ ಅಜ್ಞಾನಿಗಳು ನನ್ನ ಶ್ರೇಷ್ಠತೆಯನ್ನು ತಿಳಿದುಕೊಳ್ಳದೆ ನನ್ನನ್ನು ಅವಮಾನಿಸುತ್ತಿದ್ದಾರೆ.

ನೋಡಿದಿರಾ! ಭಗವದ್ಗೀತೆಯಲ್ಲಿ ಸಹ ದೇವರೇನು ಹೇಳಿದ್ದಾನೊ! ಭೂಮಿಮೇಲೆ ಮನುಷ್ಯನಾಗಿ ಹುಟ್ಟಿದವನ ತಲೆಗಿರುವ ಗೌರವವನ್ನು ತೆಗೆದುಹಾಕಿ, ಬೆಲೆ ಇಲ್ಲದವನಾಗಿ ಅಜ್ಞಾನಿಗಳು ಲೆಕ್ಕಿಸುತ್ತಿದ್ದಾರೆನ್ನುವುದಕ್ಕೆ ಗುರುತಾಗಿ **"ಗು"**ಗೆ ತಲೆ ಮೇಲಿರುವ ಕೊಂಬನ್ನು ತೆಗೆದುಹಾಕಿದರೂ, ದೃಶ್ಯರೂಪದಲ್ಲಿ ಅರ್ಥವಿಲ್ಲದ ಅಕ್ಷರವಾಗಿ ನಿಂತಹಾಗೆ ಕಾಣಿಸುತ್ತದೆ. ಈ ವಿಧವಾಗಿ ಎಲ್ಲರ ಭಾವನೆಗಳಿಗೆ ಸರಿಹೋಗುವ ಹಾಗೆ "ಗುರು" ಎನ್ನುವ ಅಕ್ಷರಗಳಿವೆಯೆಂದು ಅದರಲ್ಲಿ ವಿಶೇಷ ಅರ್ಥವಿದೆಯೆಂದು, ನಿಮಗಿರುವ ಜ್ಞಾನವನ್ನು ಅನುಸರಿಸಿ, ಆ ವಿಶೇಷ ತಿಳಿಯುವುದೆಂದು ಮೊದಲು ಗುರುವೇ ಹೇಳಿದ್ದಾನೆ ಅಲ್ಲವೆ! ಇಲ್ಲಿಯವರೆಗು "ಗುರು" ಪದಕ್ಕೆ ಎಷ್ಟೋ ಜನ ಎಷ್ಟೋ ಅರ್ಥಗಳು ಹೇಳಿದರೂ, ನಾವೀಗ ಹೇಳಿಕೊಂಡಹಾಗೆ ಯಾರೂ ಇಲ್ಲಿಯವರೆಗು ಹೇಳಿಕೊಳ್ಳಲಿಲ್ಲ. ದೇವರು ಇಟ್ಟಿದ ಓಡುವ ಪಂದ್ಯದಲ್ಲಿ, ನಮಗೆ ತಿಳಿದ ಜ್ಞಾನದ ಪ್ರಕಾರ ಎಲ್ಲರಿಗಿಂತ ನಾಲ್ಕು ಹೆಜ್ಜೆಗಳು ಮುಂದಕ್ಕೆ ಹೋಗಿ, ಎಲ್ಲರೂ ಹೇಳಿರುವುದಕ್ಕಿಂತ ವಿಶೇಷವಾಗಿ,

ವಿನೂತ್ನವಾಗಿ "ಗುರು" ಎನ್ನುವ ಎರಡಕ್ಷರಗಳಲ್ಲಿನ ದೃಶ್ಯರೂಪ ರಹಸ್ಯವನ್ನು, ಜ್ಞಾನ ಪದ್ಧತಿಯಲ್ಲಿ ತಿಳಿದುಕೊಂಡಿದ್ದೇವೆ. ಈ ಹೊಸ ವಿಧದ ಅರ್ಥದಿಂದ, ನಾನು ಎಲ್ಲರಿಗಿಂತ ಮೀರಿದ ಜ್ಞಾನಿಯೆಂದು ನನಗೆ ನಿರೂಪಣೆಗೆ ಬಂದಿದೆ. ಇದನ್ನು ತಿಳಿದುಕೊಂಡು ನೀವು ಸಹ ಸಂಪೂರ್ಣ ಜ್ಞಾನಿಗಳು ಆಗಬೇಕೆಂದು ತಿಳಿಸುತ್ತಿದ್ದೇನೆ.



# ಗುರುವಿಲ್ಲದ ವಿದ್ಯೆ ಕುರುಡು ವಿದ್ಯೆ

ಗುರುವಿಲ್ಲದ ವಿದ್ಯೆ ಕುರುಡು ವಿದ್ಯೆ ಎನ್ನುವ ಮಾತು ಪೂರ್ವದಲ್ಲಿ ಬಹಳ ಜನ ಅನ್ನುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಆ ಮಾತು ಬಹಳ ಅಪರೂಪವಾಗಿ ಕೇಳಿಸುತ್ತದೆ. ಇದರ ಅರ್ಥ ಯಾವ ವಿದ್ಯೆಗಾದರೂ ಗುರು ಅವಶ್ಯವೆಂದು ತಿಳಿಯುತ್ತದೆ. ಯಾರಾದರೂ ಯಾವ ವಿದ್ಯೆಯನ್ನಾದರು ಸ್ವತಃವಾಗಿ ತಿಳಿದುಕೊಳ್ಳಬೇಕೆಂದಾಗ ಗುರುವು ಇಲ್ಲದೆ ಎಷ್ಟು ತಿಳಿದುಕೊಂಡರು ಅದು ಕುರುಡು ವಿದ್ಯೆಯೆಂದು ಪೂರ್ವದ ಹಿರಿಯರು ಅನ್ನುತ್ತಿದ್ದರು. ಈ ಮಾತು ವಾಸ್ತವವೇನಾ ಎಂದು ಪರಿಶೀಲಿಸಿ ನೋಡಿದರೆ ಏಕಲವ್ಯನು ಬಿಲ್ಲು ವಿದ್ಯೆಯನ್ನು ಗುರು ಕಲಿಸದಿದ್ದರೂ ಛಲದಿಂದ ಕಲಿತುಕೊಳ್ಳುತ್ತಾನೆ. ಆತನಿಗದು ಗುರಿತಪ್ಪದ ಬಿಲ್ಲು ವಿದ್ಯೆ ಆಗಿದೆ. ಅದರೆ ಕುರುಡು ವಿದ್ಯೆ ಆಗಲಿಲ್ಲ ಅಲ್ಲವೆ! ಹಾಗೆ ಈಗಿನ ಕಾಲದಲ್ಲಿ ಯಾರು ಕಲಿಸದಿದ್ದರು, ಡ್ರೈವರ್ ವಿದ್ಯೆಯನ್ನು ಕಲಿತುಕೊಂಡು ವಾಹನಗಳನ್ನು ನಡೆಸುವವರಿದ್ದಾರೆ. ಸ್ವತಃವಾಗಿ ಸಂಗೀತವನ್ನು ಕಲಿತುಕೊಂಡು, ಗಾನ ಗಂಧರ್ವನೆಂದು ಹೆಸರಾದ ಗಾಯಕ ಬಾಲಸುಬ್ರಹ್ಮಣ್ಯಂ ನಂತಹವರು ಇದ್ದಾರೆ. ಹಾಗೆ ಕೆಲವು ವಿದ್ಯೆಗಳನ್ನು ಕೆಲವರು ಗುರುವು ಇಲ್ಲದೇನೆ, ಸುಲಭವಾಗಿ ಕಲಿತುಕೊಂಡು ಅವುಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದಿದವರು ಇದ್ದಾರೆ. ಇಂಥವುಗಳನ್ನೆಲ್ಲ ಗಮನಿಸಿದರೆ ಗುರುವಿಲ್ಲದ ವಿದ್ಯೆ ಕುರುಡು ವಿದ್ಯೆ ಎನ್ನುವ ಮಾತು ಸತ್ಯವೇನಾ? ಎಂದು ಅನುಮಾನ ಬಾರದೆ ತಪ್ಪುವುದಿಲ್ಲ. ಇಂತಹ ಸಂದರ್ಭಗಳಲ್ಲಿ ನಾವು ಚೆನ್ನಾಗಿ ಯೋಚಿಸಬೇಕಾದ ಕೆಲಸವಿದೆ. ತೀಕ್ಷಣವಾಗಿ

ಯೋಚಿಸಿ ನೋಡಿದರೆ ಗುರುವಿಲ್ಲದ ವಿದ್ಯೆ ಕುರುಡು ವಿದ್ಯೆ ಎನ್ನುವ ಮಾತಿನಲ್ಲಿ ಮೂರು ಮುಖ್ಯವಾದ ಪದಗಳು ಇವೆ. ಅವು ಒಂದು ಗುರು, ಎರಡನೆಯದು ವಿದ್ಯೆ, ಮೂರು ಕುರುಡು ವಿದ್ಯೆ, ಈ ಮಾತು ಮುಖ್ಯವಾಗಿ ವಿದ್ಯೆಯನ್ನು ಕುರಿತು ಹೇಳಿದ ಮಾತು ಆಗಿರುವುದಿರಂದ ಎರಡನೆ ಭಾಗವಾದ ವಿದ್ಯೆಯನ್ನು ಕುರಿತು ವಿವರಿಸಿಕೊಂಡು ನೋಡೋಣ.

'ವಿತ್' ಎಂಬ ಪದದಿಂದ ಹುಟ್ಟಿರುವುದು ವಿದ್ಯೆ ಎನ್ನುವ ಪದ. ವಿತ್ ಎಂದರೆ ತಿಳಿಯುವುದು ಎಂದು ಅರ್ಥ. ಅದರ ಪ್ರಕಾರ ಏನನ್ನಾದರೆ ತಿಳಿದುಕೊಳ್ಳುತ್ತಿದ್ದೇವೊ ಅಥವಾ ಏನನ್ನಾದರೆ ಕಲಿತುಕೊಳ್ಳುತ್ತಿದ್ದೇವೊ ಅದನ್ನು ವಿದ್ಯೆ ಎನ್ನುತ್ತಿದ್ದೇವೆ. ಯಾವುದನ್ನಾದರೆ ತಿಳಿದುಕೊಳ್ಳುತ್ತಿದ್ದೇವೊ ಅದನ್ನೇ ಜ್ಞಾನವೆಂದು ಸಹ ಅನ್ನುತ್ತಿದ್ದೇವೆ. ಏನನ್ನಾದರೆ ತಿಳಿಯದೆ ಇದ್ದೇವೊ, ಅದನ್ನೇ ಅಜ್ಞಾನ ಎನ್ನುತ್ತಿದ್ದೇವೆ. ಇದರ ಪ್ರಕಾರ, ವಿದ್ಯೆಯನ್ನು ಜ್ಞಾನವೆಂದು, ಅವಿದ್ಯೆಯನ್ನು ಅಜ್ಞಾನವೆಂದು ಅನ್ನುತ್ತಿದ್ದೇವೆ. ಅದೇ ವಿಧದಲ್ಲಿ ತಿಳಿದಿರುವುದನ್ನು ವಿದ್ಯೆ ಅಥವಾ ಜ್ಞಾನ, ತಿಳಿಯದಿರುವುದನ್ನು ಅವಿದ್ಯೆ ಅಥವಾ ಅಜ್ಞಾನವೆಂದು ಎಲ್ಲರಿಗೂ ಅರ್ಥವಾಗಿರುತ್ತದೆ. ಈಗ ವಿದ್ಯೆಯನ್ನಾಗಲಿ, ಅವಿದ್ಯೆಯನ್ನಾಗಲಿ ವಿಭಜಿಸಿ ನೋಡಿದರೆ ಎರಡು ವಿಧಗಳಾಗಿ ಇವೆಯೆಂದು ತಿಳಿಯುತ್ತದೆ. ಅವೇ ಒಂದು ಪ್ರಪಂಚ ವಿದ್ಯೆ, ಎರಡನೆಯದು ಪರಮಾತ್ಮ ವಿದ್ಯೆ. ಈ ಎರಡು ವಿದ್ಯೆಗಳಲ್ಲಿ ಗುರುವಿಲ್ಲದ ವಿದ್ಯೆ ಎಂದು ಯಾವುದನ್ನು ಅಂದಿದ್ದಾರೆಂದು ನೋಡಿದರೆ ಪರಮಾತ್ಮ ವಿದ್ಯೆಯೆಂದೇ ತಿಳಿಯುತ್ತದೆ. ಏಕೆಂದರೆ! ಪ್ರಪಂಚ ವಿದ್ಯೆಗಳನ್ನು ಗುರುವಿಲ್ಲದೇನೆ ನೈಪುಣ್ಯವಾಗಿ ಕಲಿತುಕೊಳ್ಳುತ್ತಿದ್ದಾರೆ. ಆ ವಿದ್ಯೆಯಲ್ಲಿನ ಫಲಿತವನ್ನು ಹೊಂದುತ್ತಿದ್ದಾರೆ. ಆದ್ದರಿಂದ ವ್ಯರ್ಥವಲ್ಲದ ಹಿರಿಯರ ಮಾತು ಪರಮಾತ್ಮ ವಿದ್ಯೆಯನ್ನು ಕುರಿತು ಹೇಳಿದೆಯೆಂದು ತಿಳಿದುಬರುತ್ತದೆ. ಇದನ್ನನುಸರಿಸಿದರೆ ಗುರುವಿಲ್ಲದ ವಿದ್ಯೆ ಎನ್ನುವುದನ್ನು ಒಂದು ಪರಮಾತ್ಮ ಜ್ಞಾನದ ಬಗ್ಗೆ ಮಾತ್ರವೆ ಲೆಕ್ಕಿಸಿ ನೋಡಬೇಕಾಗುತ್ತದೆ. ಈ ಮಾತು ಪ್ರಪಂಚ ಜ್ಞಾನಕ್ಕಾಗಲಿ ಅಥವಾ ಪ್ರಪಂಚ ವಿದ್ಯೆಗಾಗಲಿ ಅನ್ವಯಿಸುವುದಿಲ್ಲವೆಂದು ತಿಳಿಯಬೇಕು.

ಈಗ ಗುರು ಎನ್ನುವ ಪದವನ್ನು ನೋಡಿದರೆ, ವಿದ್ಯೆಯನ್ನು ಅನುಸರಿಸಿ ನೋಡಿದರೆ ಈ ಪದವು ಸಹ ಪ್ರಪಂಚ ವಿದ್ಯೆಗೆ ಅನ್ವಯಿಸುವುದಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಗುರುವನ್ನು ಒಂದು ಪರಮಾತ್ಮ ವಿದ್ಯೆ ಆದ ಬ್ರಹ್ಮಜ್ಞಾನದ ಬಗ್ಗೆ ಮಾತ್ರ ನೋಡಬೇಕು. ಈಗ ಅಂತಹ ಗುರುಗಳನ್ನು ಗಮನಿಸಿದರೆ, ದೈವಜ್ಞಾನವೆನ್ನುವ ಹೆಸರಿನಿಂದ ಎಷ್ಟೋ ಜ್ಞಾನಗಳನ್ನು ತಿಳಿಸುವವರು ಇದ್ದಾರೆ. ಎಷ್ಟೋ ಜ್ಞಾನಗಳೆಂದು ಏಕೆ ಅನ್ನುತ್ತಿದ್ದೇವೆಂದರೆ, ಒಂದಕ್ಕೊಂದು ಸ್ವಲ್ಪ ಭಿನ್ನವಾಗಿ ಇರುವುದರಿಂದ ಹಾಗೆ ಹೇಳಬೇಕಾಗಿ ಬಂದಿದೆ. ಉದಾಹರಣೆಗೆ ಒಬ್ಬ ಗುರುವೇನೊ ಸಿದ್ದ ಸಮಾಧಿಯೋಗವೆಂದು ಒಂದು ವಿಧದ ಜ್ಞಾನವನ್ನು ಬೋಧಿಸಿದರೆ, ಮತ್ತೊಬ್ಬ ಗುರು ಪಿರಮಿಡ್ ಧ್ಯಾನವೆಂದು ಬೋಧಿಸುತ್ತಾನೆ. ಇನ್ನೊಬ್ಬರು ಬ್ರಹ್ಮಕುಮಾರಿ ಸಮಾಜ ಮಾರ್ಗವೆಂದು ಬೋಧಿಸುತ್ತಾರೆ. ಹಾಗೆ ಮಾಸ್ಟರ್ ಧ್ಯಾನವೆಂದು ಒಬ್ಬರೂ, ರಾಜಯೋಗ ಧ್ಯಾನವೆಂದು ಒಬ್ಬರು, ಕುಂಡಲಿಯೋಗವೆಂದು ಒಬ್ಬರು, ಶ್ವಾಸ ಮೇಲೆ ಧ್ಯಾಸ ಎಂದು ಒಬ್ಬರು, ಮನೋಯೋಗವೆಂದು ಒಬ್ಬರು, ಅಚಲ ಯೋಗವೆಂದು ಒಬ್ಬರು, ತಾರಕ ಮಾರ್ಗವೆಂದು ಒಬ್ಬರು, ಸಾಂಖ್ಯಮಾರ್ಗವೆಂದು ಒಬ್ಬರು, ಮುಕ್ತಿ ಮಾರ್ಗವೆಂದು ಒಬ್ಬರು, ಕೇವಲ ಭಕ್ತಿಮಾರ್ಗವೆಂದು ಒಬ್ಬರು, ನಾಮ ಜಪವೆಂದು ಒಬ್ಬರು ಹೀಗೆ ಎಷ್ಟೋಜನ ಎಷ್ಟೋ ಭಿನ್ನವಾದ ವಿಧಾನಗಳನ್ನು ಬೋಧಿಸುತ್ತಿದ್ದಾರೆ. ಗುರಿ ಒಂದೇ ಆದರೂ, ಮಾರ್ಗಗಳು ಎಷ್ಟೋ ಎಂದು ಸಮರ್ಥಿಸಿಕೊಂಡು ಭಿನ್ನ ಭಿನ್ನವಾಗಿ ಬೋಧಿಸುತ್ತಿದ್ದಾರೆ. ಈ ವಿಧದಲ್ಲಿ ಬೋಧಿಸುವವರೆಲ್ಲರು ಗುರುಗಳಾಗಿಯೇ ಚಲಾವಣೆ ಆಗುತ್ತಿದ್ದಾರೆ. ಇವರು ಬೋಧಿಸುವ ವಿದ್ಯೆಗಳೆಲ್ಲ ಗುರು ಬೋಧಿಸುವ ವಿದ್ಯೆಗಳಾದಾಗ, ಅದರಲ್ಲಿ ಯಾವುದು ಕುರುಡು ವಿದ್ಯೆ ಆಗಬಾರದು. ಎಲ್ಲಾ ದೃಷ್ಠಿಯಿರುವ ವಿದ್ಯೆಗಳೇ ಆಗಿರಬೇಕು. ಎಂದರೆ ಎಲ್ಲ ವಿದ್ಯೆಗಳು ದೇವರನ್ನು ತಿಳಿಸುವ ನಿಜವಾದ ಬ್ರಹ್ಮಜ್ಞಾನವಾಗಿರಬೇಕು. ಈಗ ಅಸಲು ವಿಷಯಕ್ಕೆ ಬರೋಣ ಈ ದಿನ ಇಷ್ಟು ವಿಧಗಳಾಗಿ ಬೋಧಿಸುವ ವಿದ್ಯೆಗಳೆಲ್ಲ ದೇವರನ್ನು ತಿಳಿಸುವವುಗಳೇನಾ? ಬೋಧಿಸುವವರೆಲ್ಲರೂ ಗುರುಗಳೇನಾ? ಎಂದು ಪ್ರಶ್ನಿಸಿಕೊಂಡು ನೋಡಿದರೆ, ಯಾವ ಒಂದು

ವಿದ್ಯೆಯಿಂದ ದೇವರನ್ನು ನೋಡಲಾಗದೆ ಹೋಗುತ್ತಿದ್ದೇವೆ. ಇದರಿಂದ, ಇದು ಕುರುಡು ವಿದ್ಯೆ ಎಂದು ಒಂದೊಂದನ್ನು ತೆಗೆದುಹಾಕಬೇಕಾಗುತ್ತದೆ. ದೇವರನ್ನು ತಿಳಿಸದ ವಿದ್ಯೆ ಯಾವುದಾದರೆ ಇದೆಯೋ ಅದನ್ನು ಬೋಧಿಸಿದವನು ಗುರುವಲ್ಲವೆಂದು ತಿಳಿಯುತ್ತದೆ. ಗುರುವಿಲ್ಲದ ವಿದ್ಯೆ ಕುರುಡು ವಿದ್ಯೆ ಆದಾಗ ಕುರುಡು ವಿದ್ಯೆಯನ್ನು ಕಲಿಸಿದವನಿಗೆ ಗುರು ಇಲ್ಲವೆಂದೆ ಅರ್ಥ. ಆದರೆ ಇಲ್ಲಿ ವಿದ್ಯೆಯನ್ನು ಅಥವಾ ಜ್ಞಾನವನ್ನು ಗುರುವೇ ಬೋಧಿಸಿದ್ದಾನೆ ಅಲ್ಲವೆ ಎಂದು ನಿಮಗೆ ಪ್ರಶ್ನೆ ಬರಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ! ದೈವಜ್ಞಾನವನ್ನು ಹೆಸರಿಟ್ಟು ಬೋಧಿಸುವವನು ಗುರುವಲ್ಲ. ಅಂತಹವನು ಬೋಧಕನೇ ಆಗುತ್ತಾನೆ ಆದರೆ ಗುರುವಲ್ಲ. ದೇವರನ್ನು ತಿಳಿಸುವ ಬೋಧನೆ, ದೃಷ್ಟಿಹೊಂದಿರುವು ದಾದ್ದರಿಂದ ಅಂತಹ ಜ್ಞಾನವನ್ನು ಬೋಧಿಸಿದವನು ಮಾತ್ರವೆ ಗುರು ಆಗುವನು.

ಆದರೆ ಈಗ ಗುರುವನ್ನು ಕುರಿತು, ಗುರು ಯಾರು? ಗುರು ಯಾವಾಗ ಭೂಮಿ ಮೇಲೆ ಇರುತ್ತಾನೆ? ಗುರು ಬೋಧಿಸಿದ ಜ್ಞಾನ ಹೇಗಿರುತ್ತದೆ? ಎನ್ನುವ ಮೊದಲಾದವುಗಳಿಗೆ ಉತ್ತರ ತಿಳಿದುಕೊಳ್ಳಬೇಕಾಗುತ್ತದೆ. ಪೂರ್ವದಲ್ಲಿ ದೈವಜ್ಞಾನವನ್ನು ತಿಳಿದ ಹಿರಿಯರು, ಗುರುವನ್ನು ಅನೇಕ ವಿಧಗಳಾಗಿ ವರ್ಣಿಸಿ ಹೇಳಿದ್ದಾರೆ. ಅವರು ಹೇಳಿರುವ ವಿಷಯಗಳನ್ನು ಗಮನಿಸಿದರೆ ಗುರು ಸಾಧಾರಣ ಮನುಷ್ಯನಲ್ಲ, ಆತನು ಪ್ರತ್ಯೇಕವಾದವನೆಂದು ತಿಳಿಯುತ್ತದೆ. ಅದನ್ನನುಸರಿಸಿ ನೋಡಿದರೆ ಒಬ್ಬ ಮನುಷ್ಯ ಎಂದಿಗೂ ಗುರು ಆಗುವುದಿಲ್ಲ, ಗುರುವೇ ಮನುಷ್ಯನಾಗಿ ಬರಬಹುದು. ಈ ಮಾತು ಕೆಲವರಿಗೆ ಅರ್ಥವಾಗದೆ ಹೋಗಬಹುದು. ಇದರ ವಿವರವೇನೆಂದರೆ! **ಭೂಮಿಮೇಲೆ ಹುಟ್ಟಿದ ಮನುಷ್ಯ. ಯಾರೂ ಗುರು ಅಲ್ಲವೇ ಅಲ್ಲ. ಭೂಮಿಮೇಲೆ ಹುಟ್ಟದ ಮನುಷ್ಯ ಮಾತ್ರವೆ ಗುರು ಆಗಬಲ್ಲನು.** ಈಗ ನೀವು ಇನ್ನೂ ಸಂಶಯದೊಳಗೆ ಹೋಗುವ ಅವಕಾಶವಿದೆ. ಭೂಮಿಮೇಲೆ ಹುಟ್ಟದ ಮನುಷ್ಯ ಇರುತ್ತಾನಾ? ಇವೇನು ಮಾತುಗಳು ಈತನಿಗೇನಾದರು ಹುಚ್ಚೇನೋ? ಎಂದು ಸಹ ನನ್ನನ್ನು ಕುರಿತು ಅಂದುಕೊಳ್ಳಬಹುದು. ಕೆಲವು ಸಂದರ್ಭಗಳಲ್ಲಿ ಸತ್ಯ ಹಾಗೇ ಅನಿಸುತ್ತದೆ.

ಇಲ್ಲಿ ಎಲ್ಲರನ್ನು ಆಶ್ಚರ್ಯಪಡಿಸುವ ಸತ್ಯವೇನೆಂದರೆ, ಭೂಮಿಮೇಲೆ ಗುರು ಜನ್ಮಿಸದೆ ಶರೀರವನ್ನು ಧರಿಸಿರುವನು. ಕಾಣಿಸುವ ಶರೀರದಿಂದಿರುವ ಗುರುವನ್ನು "ಗುರು ಸಾಕ್ಷಾತ್ ಪರಬ್ರಹ್ಮ" ಎಂದು ಹಿರಿಯರು ಹೇಳಿದಹಾಗೆ ಆತನು ದೈವಶಕ್ತಿಯಲ್ಲಿನ ಅಥವಾ ದೈವದಲ್ಲಿನ ಅಂಶವೇ. ದೈವವು ಅಣುಅಣುವಿನಲ್ಲು ಎಲ್ಲಾಕಡೆ ವ್ಯಾಪಿಸಿದೆ. ಆದ್ದರಿಂದ ಒಂದುಕಡೆ ಮರಣಿಸುವುದಾಗಲಿ, ಒಂದು ಕಡೆ ಜನ್ಮಿಸುವುದಾಗಲಿ ನಡೆಯುವುದಿಲ್ಲ. ಎಲ್ಲಾಕಡೆ ಇರುವ ದೈವಶಕ್ತಿ ತಾಯಿಗರ್ಭದಲ್ಲಿ ಶಿಶು ಶರೀರವಾಗಿ ತಯಾರಾಗಿ, ಒಳಗಿನಿಂದಲೇ ಚೈತನ್ಯ ವನ್ನೊಂದಿ ಎಂದರೆ ಸಜೀವವಾಗಿ ಹುಟ್ಟುತ್ತಿದೆ. ಹಾಗೆ ಹುಟ್ಟುವ ಶರೀರಕ್ಕೆ ತಾಯಿ ಅಂಡಾಣುವುನಿಂದಾಗಲಿ, ತಂದೆ ವೀರ್ಯಕಣದಿಂದಾಗಲಿ ಕೆಲಸವಿಲ್ಲ. ಸಾಧಾರಣ ಮನುಷ್ಯ ಹುಟ್ಟುವುದಕ್ಕೆ ತಾಯಿ ಅಂಡವು, ತಂದೆ ವೀರ್ಯಕಣವು ತಪ್ಪದೆ ಬೇಕಾಗುತ್ತದೆ. ವಿಶೇಷವೇನೆಂದರೆ, ತಾಯಿ ಗರ್ಭದಲ್ಲಿ ತಯಾರಾದ ಸಾಧಾರಣ ಮನುಷ್ಯನ ಶರೀರ ಗರ್ಭದಿಂದ ಜೀವ ಇಲ್ಲದೆ ಹುಟ್ಟುವುದು. ಹುಟ್ಟಿದ ಸಾಧಾರಣ ಶಿಶು ಶರೀರದೊಳಗೆ ಜೀವ ಮತ್ತು ಚೈತನ್ಯವು ಅಥವಾ ಆತ್ಮ, ಶಿಶು ಹುಟ್ಟಿದ ನಂತರವೆ ಸೇರುತ್ತದೆ. ಗರ್ಭದಿಂದ ಹೊರಗೆ ಬಂದ ನಂತರ ಚಲನೆ ಬರುವ ಅಥವಾ ಚೈತನ್ಯ ಬರುವ ಮನುಷ್ಯ ಸಾಧಾರಣ ಮನುಷ್ಯನೇ. ಹಾಗಲ್ಲದೆ ಬಹಳ ಅಪರೂಪವಾಗಿ ಕೆಲವು ಸಾವಿರ ವರ್ಷಗಳಿಗೊ ಅಥವಾ ಕೆಲವು ಲಕ್ಷ ವರ್ಷಗಳಿಗೊ ಗರ್ಭದೊಳಗಿನಿಂದಲೆ ಚೈತನ್ಯದಿಂದ ಹುಟ್ಟುವ ಶರೀರವು ಸಾಧಾರಣ ಮನುಷ್ಯನಲ್ಲ. ಆ ಮನುಷ್ಯನೆ ಗುರು. ಅಂತಹ **ಮನುಷ್ಯನನ್ನೇ ಸಾಕ್ಷಾತ್ ದೈವವೆಂದು** ಹಿರಿಯರು ಹೇಳಿದ್ದಾರೆ. ಗರ್ಭದಿಂದ ಯಾರು, ಹೇಗೆ ಹುಟ್ಟುತ್ತಿದ್ದಾರೊ ಮನುಷ್ಯರಿಗೆ ತಿಳಿಯದೆ ಹೋಗಿದೆ. ಆದ್ದರಿಂದ ಕೆಲವು ಸಾವಿರ ವರ್ಷಗಳಿಗೆ ಭೂಮಿಮೇಲೆ ಬರುವ ಗುರುವನ್ನು ಮಾನವರು ಗುರುತಿಸದೆ ಹೋಗುತ್ತಿದ್ದಾರೆ. ಆದ್ದರಿಂದ ಜ್ಞಾನ ಹೇಳುವವರನ್ನೆಲ್ಲ ಗುರುಗಳೆಂದು ಲೆಕ್ಕಿಸುತ್ತಿದ್ದಾರೆ. ತಾನು ಗುರು ಅಂದುಕೊಂಡವನು ಬೋಧಿಸುವ ಬೋಧನೆ ದೈವಜ್ಞಾನವನ್ನು ತಿಳಿಸುವುದೊ ಅಲ್ಲವೊ ತಿಳಿಯದೆ ಹೋಗುತ್ತಿದ್ದಾನೆ. ಆದ್ದರಿಂದ ಮಾನವನು ಭೂಮಿಮೇಲೆ ಬಂದಿರುವ ಗುರುವನ್ನು ಗುರುತಿಸದೆ ತನಗೆ

ಒಪ್ಪಿಗೆಯಾದವರನ್ನು, ತನಗೆ ಪ್ರಪಂಚಮೇಲು ಮಾಡುವ ಬೋಧನೆಗಳನ್ನು ಹೇಳುವವರನ್ನು ಗುರುವಾಗಿ ಲೆಕ್ಕಿಸುತ್ತಾರೆ.

ಗುರು ಮನುಷ್ಯನಾಗಿ ಭೂಮಿಮೇಲೆ ಬಂದರೆ, ಅಸಲಾದ ದೇವರುಗಳನ್ನು ಕುರಿತೆ ಬೋಧಿಸುತ್ತಾನೆ ಹೊರತು ಚಿಲ್ಲರೆ ದೇವರನ್ನು ಕುರಿತು ಬೋಧಿಸುವುದಿಲ್ಲ, ಆತನ ಬೋಧನೆ ಪ್ರಪಂಚ ಲಾಭಗಳನ್ನು ಕೈಗೂಡಿಸುವುದಾಗಿ ಇರದೆ, ಕೇವಲ ಮುಕ್ತಿಯನ್ನು ಹೊಂದುವ ವಿಧಾನವಾಗಿರುತ್ತದೆ. ಆತನು ಯಾವಾಗ ಭೂಮಿಮೇಲೆ ಬಂದರೂ, ಎಷ್ಟುಬಾರಿ ಬಂದರೂ, ಒಂದೇ ದೈವವನ್ನು ಕುರಿತು, ಒಂದೇ ವಿಧಾನದಲ್ಲಿ ಬೋಧಿಸುತ್ತಾನೆ ಹೊರತು, ಬಂದ ಪ್ರತಿಸಾರಿ ಬೇರೆ ಬೇರೆ ವಿಧಾನಗಳನ್ನು ಹೇಳುವುದಿಲ್ಲ. ಅಷ್ಟೇ ಅಲ್ಲದೆ ದೈವದಿಂದ ದೈವಪ್ರತಿನಿಧಿಯಾಗಿ ಬಂದಿರುವ ಗುರು, ಎಂದಿಗೂ ತಾನು ಗುರುವೆಂದು ಪ್ರಜೆಗಳಿಗೆ ತಿಳಿಯದ ಹಾಗಿರುವನು. ಸಾಧಾರಣ ಮನುಷ್ಯನಾಗಿ ಇರುತ್ತಲೆ ತನ್ನ ಜ್ಞಾನವನ್ನು ಪ್ರಜೆಗಳೆಲ್ಲರು ತಿಳಿದುಕೊಳ್ಳುವ ಹಾಗೆ ಬೋಧಿಸುವನು. ಭೂಮಿಮೇಲೆ ಮತಗಳು, ಮತಪರವಾದ ಬೋಧನೆಗಳು ಎಷ್ಟಿದ್ದರೂ, ಗುರು ಎಂದಿಗೂ ಮತ ಸಂಬಂಧ ಬೋಧನೆಗಳನ್ನು ಹೇಳದೆ, ಆತನು ದೈವಕ್ಕೆ ಸಂಬಂಧಿಸಿದ ಬೋಧನೆಗಳೇ ಹೇಳುವನು. ಭೂಮಿಮೇಲೆ ಅರ್ಥಮಾಡಿಕೊಳ್ಳದ ಅಜ್ಞಾನ ಪ್ರಜೆಗಳು ಆತನನ್ನು ವಿರೋಧಿಸಿದರೂ, ಆತನ ಬೋಧನೆ ವಿಧಾನವನ್ನು ಬದಲಾಯಿಸಿ, ಅವರಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ಎಂದಿಗೂ ಹೇಳುವುದಿಲ್ಲ. ಆತನ ಬೋಧನೆ, ಎಲ್ಲಾ ವ್ಯಾಪಿಸಿದ, ಎಲ್ಲರಿಗೂ ಸಂಬಂಧಿಸಿದ ದೈವವನ್ನು ಕುರಿತೇ ಇರುವುದು. ಗುರು ಇತರ ದೇಶಗಳಲ್ಲಿ ಸಹ ಅಲ್ಲಿ ಬೇರೆ ಬೇರೆ ಹೆಸರುಗಳಲ್ಲಿ ಚಲಾವಣಿ ಆದರೂ ದೈವಜ್ಞಾನವನ್ನು ಮಾತ್ರವೇ ತಿಳಿಸಿ, ತಾನ್ಯಾರೆಂದು ಗುರುತಿಸದಹಾಗೆ ಇದ್ದು ಹೋಗಿದ್ದಾನೆ. ನಮ್ಮ ಭಾರತದೇಶದಲ್ಲಿ ಗುರುಗಳಾಗಿ ಎಷ್ಟೋಜನ ಚಲಾವಣೆ ಆಗುತ್ತಿದ್ದರು ಸುಮಾರು ಐದುಸಾವಿರ ನೂರ ಎಪ್ಪತ್ತು ವರ್ಷಗಳ ಪೂರ್ವದಲ್ಲಿ ದೈವದ ಒಂದು ಅಂಶ ಉತ್ತರ ಪ್ರದೇಶದಲ್ಲಿ ಹುಟ್ಟಿದ ಹಾಗೆ, ಆತನೇ ಶ್ರೀಕೃಷ್ಣನೆಂದು ಇಂದಿಗೆ ತಿಳಿದು

ಕೊಂಡಿದ್ದೇವೆ. ಕೃಷ್ಣನು ಗುರುವಿನ ರೀತಿಯಲ್ಲಿ ಎಂದಿಗೂ ಪ್ರವರ್ತಿಸದಿದ್ದರು ಆತನು ಹೇಳಿದ ಬೋಧನೆಗಳನ್ನು ಅನುಸರಿಸಿ ಆಗಿನ ಕೃಷ್ಣನು ಗುರು ಎಂದು ಕೆಲವರು ತಿಳಿದುಕೊಳ್ಳುತ್ತಿದ್ದಾರೆ.

ಈದಿನ ನಮ್ಮ ದೇಶದಲ್ಲಿ ಪರಮಹಂಸರು, ಭಗವಾನ್‌ರು, ಬಾಬಾಗಳು, ಅಮ್ಮಂದಿರು, ಮಹರ್ಷಿಗಳು, ಬ್ರಹ್ಮರ್ಷಿಗಳು ಎಂದು ಹೆಸರನ್ನು ತಗುಲಿಸಿಕೊಂಡ ಎಷ್ಟೋ ಗುರುಗಳಿದ್ದಾರಲ್ಲವೆ! ಅವರನ್ನು ಗುರುಗಳೆಂದು ಹೇಳದೆ ಐದುಸಾವಿರ ವರ್ಷಗಳ ಪೂರ್ವದಲ್ಲಿ ಹುಟ್ಟಿದ ಕೃಷ್ಣನನ್ನು ಗುರುವೆಂದು ಹೇಳುತ್ತಿದ್ದೀರೇನು? ಎಂದು ನನ್ನನ್ನು ನೀವು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ! ನಾನು ಯಾರ ಮುಖಸ್ತುತಿಗಾಗಲಿ, ಯಾರನ್ನು ನೋಯಿಸುವುದಕ್ಕಾಗಲಿ ಮಾತನಾಡುತ್ತಿಲ್ಲ. ಸತ್ಯವನ್ನೇ ಹೇಳಬೇಕೆಂದುಕೊಂಡಿದ್ದೇವೆ ಆದ್ದರಿಂದ ಈ ದಿನ ಭೂಮಿಮೇಲೆ ಎಷ್ಟೋಜನ ಬೋಧಿಸುವವರಿದ್ದರೂ, ಅವರಲ್ಲಿ ಯಾರು ಗುರುವಾಗಿ ಇಲ್ಲ, ಅವರು ಹೇಳುವವು ಒಬ್ಬರಿಗೊಬ್ಬರಿಗೆ ಭಿನ್ನವಾದ ಬೋಧನೆಗಳು. ಈ ದಿನ ಕೃಷ್ಣನು ಹೇಳಿದ ಭಗವದ್ಗೀತೆಯನ್ನು ಬೋಧಿ ಸುವವರಿದ್ದರು, ಕೃಷ್ಣನು ಹೇಳಿದ ಭಾವಕ್ಕೆ ಬೇರೆಯಾಗಿ ಬೋಧಿಸುತ್ತಿದ್ದಾರೆ. ಆದ್ದರಿಂದ ಅವರನ್ನು ಸರಿಯಾದ ಬೋಧಕರು ಸಹ ಅಲ್ಲವೆಂದೇ ಹೇಳಬಹುದು. ಇದಕ್ಕೂ ಮೊದಲು ಇತರರಿಂದ ಬೋಧಿಸಲ್ಪಟ್ಟಿರುವುದನ್ನೇ ಬೋಧಿಸುವವನು ಬೋಧಕನೇ ಆಗುತ್ತಾನೆ. ಗುರು ಎಂದಿಗೂ ಇತರರು ಬೋಧಿಸಿರುವುದನ್ನು ಬೋಧಿಸುವುದಿಲ್ಲ. ಗುರು ಬೋಧಿಸುವುದು ಗುರುವಿಗೆ ಹೊರತು, ಯಾರಿಗೂ ತಿಳಿದಿಲ್ಲ. ಆದುದರಿಂದ ಏನನ್ನಾದರು ಹೇಳಿದರೆ ಅದು ಮೊದಲನೆ ಬೋಧನೆ ಯಾಗಿರುತ್ತದೆ. ಯಾರೂ ಹೇಳದ ಬೋಧನೆಯನ್ನಾಗಲಿ, ಯಾರೂ ಬರೆಯದ ಜ್ಞಾನವನ್ನಾಗಲಿ ಹೇಳುವವನೇ ಗುರು. ಈ ಸೂತ್ರವನ್ನು ಅನುಸರಿಸಿ ನೋಡಿದರೆ, ಇದಕ್ಕೂ ಮೊದಲು ರಾಮಾನುಜರು ಹೇಳಿದ ಬೋಧನೆಗಳನ್ನೇ ಬೋಧಿ ಸುವವರಾಗಲೀ, ಇದಕ್ಕಿಂತ ಮೊದಲು ಶಂಕರಾಚಾರ್ಯರು ಹೇಳಿದ ಬೋಧನೆಗಳನ್ನು ಬೋಧಿಸುವವರಾಗಲೀ, ಹಾಗೆ ರಾಮಕೃಷ್ಣ ಪರಮಹಂಸ,

ವಿವೇಕಾನಂದ ಹೇಳಿದವುಗಳನ್ನು ಹೇಳುವವರಾಗಲಿ ಗುರುಗಳು ಆಗುವುದಿಲ್ಲ. ಬೋಧಕರೆಂದೇ ಹೇಳಬಹುದು. ಈಗ ನೀವೊಂದು ಪ್ರಶ್ನೆ ಕೇಳುವುದಕ್ಕೆ ಅವಕಾಶವಿದೆ. ಇದಕ್ಕಿಂತ ಮೊದಲು ಹೇಳಿರುವ ಬೈಬಲ್ ಆಗಲಿ, ಖುರಾನ್ ಆಗಲಿ, ಭಗವದ್ಗೀತೆಯನ್ನಾಗಲಿ ಹೇಳುವವರು ಗುರುಗಳು ಅಲ್ಲವಲ್ಲ! ಅವರು ಸಹ ಕೇವಲ ಬೋಧಕರೇ ಅಲ್ಲವೆ! ಎಂದು ಕೇಳಬಹುದು. ಅದಕ್ಕೆ ಸೂತ್ರದ ಪ್ರಕಾರ, ಬೋಧಕರೆಂದೇ ನಾವು ಹೇಳಿದರೆ, ಕೃಷ್ಣನು ಅಧರ್ಮವು ಹೆಚ್ಚಾದಾಗ ಮತ್ತೆ ಹುಟ್ಟುತ್ತೇನೆಂದು ಹೇಳಿದ್ದಾನಲ್ಲ! ಆಗ ದೇವರ ಅಂಶದಿಂದ ಹುಟ್ಟಿದವನಾದ್ದರಿಂದ ಗುರು ಆಗುತ್ತಾನಾ? ಅಥವಾ ಮೊದಲು ಹೇಳಿದ ತನ್ನ ಬೋಧನೆಯನ್ನೇ ಹೇಳುವುದರಿಂದ ಬೋಧಕನಾಗುತ್ತಾನಾ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ತಾನು ಬೋಧಿಸಿರುವುದನ್ನು ಪುನಃ ತಾನೇ ಬೋಧಿಸುವವನು ಗುರುವೇ ಆಗುತ್ತಾನೆ ಆದರೆ ಎಂದಿಗೂ ಬೋಧಕನಲ್ಲ. ಇತರರು ಬೋಧಿಸಿರುವುದನ್ನು ಹೇಗೆ ಬೋಧಿಸಿದರು, ಅವನು ಬೋಧಕನೇ ಆಗುತ್ತಾನೆ ಆದರೆ ಎಂದಿಗೂ ಗುರು ಆಗುವುದಿಲ್ಲ. ಈ ಸೂತ್ರದ ಪ್ರಕಾರ ಈಗಿರುವವರಲ್ಲಿ ಯಾರು ಬೋಧಕರೊ, ಯಾರು ಗುರುಗಳೊ ಲೆಕ್ಕಿಸಿ ನೀವೇ ಯೋಚಿಸಿ ಹೇಳಬಹುದು.

ಭೂಮಿಮೇಲೆ ಯಾವಾಗಾದರು ಗುರು ಒಬ್ಬನೇ ಇರುವುದಕ್ಕೆ ಅವಕಾಶವಿದೆ. ಆದರೆ ಇಬ್ಬರು ಅಥವಾ ಮೂವರು ಗುರುಗಳಿರುವುದಕ್ಕೆ ಅವಕಾಶವಿಲ್ಲ. ಭೂಮಿಮೇಲೆ ಅಪರೂಪವಾಗಿ ಬರುವ ಗುರು, ಯಾವುದೊ ಒಂದು ದೇಶದಲ್ಲಿ ಒಬ್ಬನಾಗಿಯೇ ಇರುತ್ತಾನೆ. ಪ್ರಸ್ತುತ ಭಾರತದೇಶದಲ್ಲಿ ಚಿಕ್ಕ ದೊಡ್ಡ ಎಲ್ಲರನ್ನು ಸೇರಿಸಿಕೊಂಡರೆ ಸಾವಿರಜನ ಗುರುಗಳಾಗಿ ಚಲಾವಣೆಯಾಗುವವರು ಇದ್ದಾರೆಂದುಕೊಳ್ಳೋಣ. ಒಂದು ವೇಳೆ ದೇವರ ಅಂಶ (ಶಕ್ತಿ) ಭೂಮಿಮೇಲೆ ಮನುಷ್ಯನಾಗಿ ಬಂದಿದ್ದರೆ, ಸಾವಿರ ಜನರಲ್ಲಿಯೂ ಗುರು ಒಬ್ಬನೇ ಇರುತ್ತಾನೆ. ಉಳಿದ 999 ಜನ ಗುರುಗಳಲ್ಲ, ಕೇವಲ ಬೋಧಕರೆಂದೇ ತಿಳಿಯಬಹುದು. 999 ಜನರಲ್ಲಿ ಎಷ್ಟು ದೊಡ್ಡ ಹೆಸರುವಾಸಿಯಾದವರಿದ್ದರೂ,

ನಾವು ಎಷ್ಟು ದೊಡ್ಡದಾಗಿ ಭಾವಿಸಿಕೊಂಡರು ಅವರು ಗುರುಗಳಲ್ಲವೆಂದು ತಿಳಿಯಬೇಕು. ಒಂದುವೇಳೆ ಪ್ರಸ್ತುತಕಾಲದಲ್ಲಿ ದೇವರ ಅಂಶ ಭೂಮಿಮೇಲೆ ಹುಟ್ಟದೇ ಹೋದರೆ, ಸಾವಿರ ಜನಗಳಲ್ಲಿ ಸಹ ಗುರುವಿಲ್ಲವೆಂದೇ ಹೇಳಬಹುದು. ಕೆಲವು ಲಕ್ಷ ವರ್ಷಗಳಲ್ಲಿ, ಒಂದುಬಾರಿ ಮಾತ್ರವೆ ಬಂದು ಹೋಗುವ ಗುರುವನ್ನು ಗುರುತಿಸುವುದು ಕಷ್ಟವಾದ ಕೆಲಸ. ಯಾವಾಗಲೊ, ಎಷ್ಟು ವರ್ಷಗಳಿಗೋ ಅಪರೂಪವಾಗಿ ಬರುವ ಗುರುವನ್ನು, ಯಾವಾಗಲೂ ಭೂಮಿಮೇಲೆ ಇರುತ್ತಾನೆಂದುಕೊಳ್ಳುವುದು ತಪ್ಪಾಗುತ್ತದೆ. ಕೆಲವರು ಗುರು ಪರಂಪರೆ ಎಂದು ಒಬ್ಬರ ನಂತರ ಒಬ್ಬರು ರಾಜರು ಸಿಂಹಾಸನ ಏರಿದಹಾಗೆ ನಾನೂ, ನನ್ನ ನಂತರ ಈತನು, ಈತನ ನಂತರ ಆತನು ಗುರುವೆಂದುಕೊಳ್ಳುವುದು ತಪ್ಪಲ್ಲವೆ! ವಾಸ್ತವಕ್ಕೆ ಗುರುಪರಂಪರೆ ಭೂಮಿಮೇಲೆ ಇರುವುದಿಲ್ಲ. ಒಂದು ಬಾರಿ ಗುರು ಭೂಮಿಮೇಲೆ ಬಂದರೆ ಮತ್ತೆ ಬರುವುದಕ್ಕೆ ಎಷ್ಟೋ ಸುಧೀರ್ಘಕಾಲ ಹಿಡಿಯುತ್ತದೆ. ಆದ್ದರಿಂದ ಗುರು ಭೂಮಿಮೇಲೆ ಎಲ್ಲ ಕಾಲದಲ್ಲಿಯು ಇರುವುದಿಲ್ಲ. ಗುರುವಿಲ್ಲದ ಕಾಲದಲ್ಲಿ, ಗುರುವಲ್ಲದವರಿಂದ ಕೇಳುವ ಬೋಧನೆಯೆಲ್ಲವು ಗುರುವಿಲ್ಲದ ಬೋಧನೆಯೆಂದೇ ಹೇಳಬಹುದು. ಆದ್ದರಿಂದ ಪೂರ್ವದಲ್ಲಿ "ಗುರುವು ಇಲ್ಲದ ವಿದ್ಯೆ ಕುರುಡು ವಿದ್ಯೆ" ಎಂದಿದ್ದಾರೆ. ಇಲ್ಲಿಯವರೆಗು ವಿದ್ಯೆ ಎನ್ನುವುದಕ್ಕೆ ಅರ್ಥ ತಿಳಿದುಕೊಂಡಿದ್ದೇವೆ. ಹಾಗೆ ಗುರು ಎನ್ನುವ ಪದಕ್ಕೆ ವಿವರವನ್ನು ತಿಳಿದುಕೊಂಡಿದ್ದೇವೆ. ಗುರುವಿಲ್ಲದ ಕಾಲವನ್ನು, ಗುರುವಿರುವ ಕಾಲವನ್ನು ಕುರಿತು ಹೇಳಿಕೊಂಡಿದ್ದೇವೆ. ಇನ್ನು ಕುರುಡು ವಿದ್ಯೆಗೆ ಅರ್ಥ ತಿಳಿದುಕೊಂಡಿದ್ದೇವೆ. "ಗುರುವಿಲ್ಲದ ವಿದ್ಯೆ ಕುರುಡು ವಿದ್ಯೆ" ಹೇಗೆ ಆಗುತ್ತದೊ ತಿಳಿದುಕೊಳ್ಳೋಣ.

ಪ್ರತ್ಯಕ್ಷವಾಗಿ ಗುರು ಇದ್ದು ಹೇಳಿದ ಬೋಧನೆಯನ್ನು ಆಶ್ರಯಿಸುವುದರಿಂದ ಆ ವಿದ್ಯೆ ಮಾರ್ಗವನ್ನು ಚೆನ್ನಾಗಿ ತೋರಿಸಿ ಗಮ್ಯವನ್ನು ಸೇರಿಸುತ್ತದೆ. ಹುಟ್ಟಿದ ಪ್ರತಿ ಮನುಷ್ಯನಿಗೆ ಮುಕ್ತಿ ಹೊಂದುವುದು ಮುಖ್ಯ. ಮುಕ್ತಿ ಎನ್ನುವುದು ಗಮ್ಯವಾದಾಗ, ಜ್ಞಾನ ಅಥವಾ ವಿದ್ಯೆ ಮಾರ್ಗವಾದಾಗ, ಗುರು ದಾರಿಯನ್ನು

ತೋರಿಸುವ ದೀಪವಾಗಿದ್ದಾನೆಂದು ಅಂದುಕೊಳ್ಳೋಣ. ದೀಪ ಇಲ್ಲದ ಮಾರ್ಗ ದಲ್ಲಿ ಹೋಗಲಾರೆವು. ದೀಪವಿಲ್ಲದ ಪ್ರಯಾಣ ಅಂಧಕಾರಮಯವೆಂದು ತಿಳಿಯಬೇಕು. ಅದರಿಂದ ಗುರುವಿಲ್ಲದ ಜ್ಞಾನ ಕುರುಡನ ಪ್ರಯಾಣವಂತದ್ದೆಂದು ಹೇಳಬಹುದು. ಗುರು ಭೂಮಿಮೇಲೆ ಬಂದಾಗ 40 ಅಥವಾ 50 ವರ್ಷ ಗಳಾಗಲಿ, ನಾಲ್ಕು ಅಥವಾ ಐದು ವರ್ಷಗಳಾಗಲಿ, ಹೇಳಿದ ಬೋಧನೆ ಯನ್ನೇ ದೃಷ್ಠಿಯಿರುವ ಬೆಳಕಿರುವ ಬೋಧನೆಯೆಂದು ಹೇಳಬಹುದು. ಗುರು ಹೋದ ನಂತರ ಅದೇ ಬೋಧನೆಯನ್ನು ಇರುವುದು ಇದ್ದಹಾಗೆ ಇತರರಿಂದ ತಿಳಿದುಕೊಂಡಾಗಲು, ಅದು ಗುರುವಿನ ಬೋಧನೆಯೇ ಅಗುತ್ತದೆ. ಆದ್ದರಿಂದ ಅದು ಸಹ ದೃಷ್ಠಿಯಿರುವ ವಿದ್ಯೆಯೇ ಆಗುತ್ತದೆ. ಹಾಗಲ್ಲದೆ ಗುರು ಹೇಳಿಹೋದ ನಂತರ ಅದು ಆತನ ಭಾವನೆಯಿಂದ ಅಲ್ಲದೆ ಬೇರೆ ಭಾವನೆಯಿಂದ ಹೇಳಿದರೆ ಅದು ಗುರುವಿನ ಬೋಧನೆಯಲ್ಲ. ಆದ್ದರಿಂದ ಅಂತಹದ್ದನ್ನು ಕುರುಡು ವಿದ್ಯೆಯೆಂದೇ ಹೇಳಬಹುದು. ಗುರು ಹೇಳಿದ ಜ್ಞಾನದ ಭಾವವು ಬೇರೆಯಾದಾಗ, ಅದು ಕುರುಡು ವಿದ್ಯೆ ಆದರೆ, ಗುರು ಹೇಳಿರುವುದು ಅಲ್ಲದಿದ್ದರು ಯಾವ ಜ್ಞಾನವನ್ನಾಗಲಿ ಕುರುಡು ವಿದ್ಯೆ ಎಂದು ಹೇಳಬಹುದು. ಆದ್ದರಿಂದ ಈ ದಿನ ಭಗವದ್ಗೀತೆಗೆ ಬೇರೆಯಾಗಿ ಇರುವ ಶೈವ, ವೈಷ್ಣವರಾಗಲಿ, ಶ್ವಾಸದ ಮೇಲೆ ಧ್ಯಾಸವಾಗಲಿ, ಮತ್ತು ಯಾವ ಇತರೆ ಮಾರ್ಗಗಳಾಗಲಿ ಮೋಕ್ಷವೆನ್ನುವ ಗಮ್ಯವನ್ನು ಸೇರಿಸದ ಕುರುಡು ವಿದ್ಯೆಗಳೆಂದೇ ಹೇಳಬಹುದು. ಈಗ ಕೆಲವರಿಗೆ ನಮ್ಮ ಮೇಲೆ ಕೋಪ ಬಂದಿರಬಹುದು ಆದರೂ ಪರವಾಗಿಲ್ಲ ನಾನು ಹೇಳುವುದು ಸತ್ಯವೊ ಅಸತ್ಯವೊ ನೀವೇ ನೋಡಿಕೊಳ್ಳಿ. ಈ ದಿನ ಬೋಧಿಸುವವರೆಲ್ಲರಲ್ಲಿಯೂ ಯಾರೊಬ್ಬರು ಗುರು ಇಲ್ಲದಿರುವಾಗ, ಬೋಧಿಸುವ ಬೋಧನೆಗಳಲ್ಲಿ ಯಾವೊಂದು ಗುರು ಹೇಳಿರುವುದು ಅಲ್ಲದಿರುವಾಗ, ಅದು ಕುರುಡು ವಿದ್ಯೆ ಅಲ್ಲದೆ ಏನಾಗುತ್ತದೆ? ಅಂತಹದ್ದನ್ನೇ ಗುರುವಿಲ್ಲದ ವಿದ್ಯೆ ಕುರುಡು ವಿದ್ಯೆ ಎಂದಿದ್ದಾರೆ. ಒಂದುವೇಳೆ ಗುರುವೆಂದು ಹೆಸರು ಇಟ್ಟುಕೊಂಡವನಾದರೆ ನೀನು ಗುರುವೊ, ಬೋಧಕನೊ ಸೂತ್ರದ ಪ್ರಕಾರ ನೋಡಿಕೊ! ಒಂದು ವೇಳೆ ನೀನು ಬೋಧಕನಾದರೆ ನೀನು ಬೋಧಿಸುವ ಬೋಧನೆ ಭಗವದ್ಗೀತೆಯಲ್ಲಿ ಗುರು

ಹೇಳಿರುವುದೊ ಅಲ್ಲವೊ, ಸೂತ್ರದ ಪ್ರಕಾರ ನೋಡಿಕೊ! ಒಂದು ವೇಳೆ ನೀನು ಭಗವದ್ಗೀತೆಯನ್ನೇ ಬೋಧಿಸುತ್ತಿದ್ದರೆ ಅದು ಗುರು ಹೇಳಿದಹಾಗೆ ಇದೆಯೊ ಇಲ್ಲವೊ ನೋಡಿಕೊ! ಒಂದು ವೇಳೆ ನಿನಗೆ ಬೋಧನೆಗಳು ತಿಳಿದುಕೊಳ್ಳುವ ವನಾದರೆ ನೀನು ಆಶ್ರಯಿಸಿರುವುದು ಗುರುವನ್ನಾ ಬೋಧಕನನ್ನಾ ನೋಡಿಕೊ, ಒಂದು ವೇಳೆ ನೀನು ಬೋಧಕನನ್ನು ಆಶ್ರಯಿಸಿದ್ದರೆ ನೀನು ಕೇಳುತ್ತಿರುವ ಬೋಧನೆಗಳಾಗಲಿ, ನೀನು ಓದುತ್ತಿರುವ ಬೋಧನೆಗಳು ಗುರು ಬೋಧನೆಗಳೊ ಅಲ್ಲವೊ ನೋಡಿಕೊ. ಒಂದು ವೇಳೆ ನಿನಗೆ ಗುರುಬೋಧನೆಗಳು ತಿಳಿಯದೆ ಬೋಧಕರ ಬೋಧನೆಗಳು ಮಾತ್ರವೇ ತಿಳಿಯುತ್ತಿದ್ದರೆ ಅವು ಕುರುಡು ವಿದ್ಯೆಗಳೇಯೆಂದು, ಮೋಕ್ಷವನ್ನು ಸೇರಿಸುವುದಿಲ್ಲವೆಂದು ತಿಳಿದುಕೊ. ಒಂದು ವೇಳೆ ಇಲ್ಲಿಯವರೆಗು ಗುರುವನ್ನು ಆಶ್ರಯಿಸದೆ ಬೋಧಕನನ್ನು ಆಶ್ರಯಿಸಿದರೂ, ಗುರುವಿನ ಜ್ಞಾನ ತಿಳಿಯದೆ ಬೋಧಕರ ಮತವರ್ಗ ಬೋಧನೆಗಳೆ ತಿಳಿದಿದ್ದರೂ "ಗುರುವು ಇಲ್ಲದ ವಿದ್ಯೆ ಕುರುಡು ವಿದ್ಯೆ" ಎಂಬ ಮಾತು ನಿನಗೆ ಪೂರ್ತಿ ಅನ್ವಯಿಸುತ್ತದೆಂದು ತಿಳಿದುಕೊ. ಈಗಿನಿಂದಾದರು ಗುರುವನ್ನಾಗಲಿ ಅಥವಾ ಗುರುವಿನ ಬೋಧನೆಯನ್ನಾಗಲಿ ಆಶ್ರಯಿಸಿ ಬೆಳಕಿನಲ್ಲಿ ಪ್ರಯಾಣಿಸಬೇಕು. ಈಗ ಗುರು ಇಲ್ಲದೆ ಹೋದರೂ ಗುರು ಹೇಳಿಹೋದ ಬೋಧನೆ ಶಾಶ್ವತವಾಗಿ ಭಗವದ್ಗೀತೆಯ ರೂಪದಲ್ಲಿದೆ. ಆದ್ದರಿಂದ ಗೀತೆಯನ್ನು ಆಶ್ರಯಿಸು. ಭಗವದ್ಗೀತೆಗಳು ಗುರು ಹೇಳಿದ ಭಾವದಿಂದ ಅಲ್ಲದೆ ಬೇರೆ ಭಾವನೆಯಿಂದ ಇವೆ. ಸುಮಾರು ಮೂರುನೂರು ಭಾರತದೇಶದಲ್ಲಿ ಇವೆ. ಹಾಗೆಂದು ಗುರುವಿನ ಭಾವವಿಲ್ಲದ್ದು, ಭೂಮಿಮೇಲೆ ಇಲ್ಲವೆಂದು ಹೇಳುವುದಕ್ಕೆ ಅವಕಾಶವಿಲ್ಲ. ಅಂತಹ ಭಗವದ್ಗೀತೆಯನ್ನು ಆಶ್ರಯಿಸಿ ಅಸಲಾದ ಭಾವವನ್ನು ತಿಳಿದುಕೊಂಡು **"ಗುರುವಿನ ವಿದ್ಯೆ ದೃಷ್ಠಿಯಿರುವ ವಿದ್ಯೆ"** ಎಂದು ನಿರೂಪಿಸಿಕೊ. ಶ್ರದ್ಧೆ ಕಡಿಮೆಯಿರುವ ಬಹಳಜನರಿಗೆ ಗುರುವಿಲ್ಲದ ವಿದ್ಯೆ ಕುರುಡು ವಿದ್ಯೆಯಾದರೆ ಹೆಚ್ಚಿನ ಶ್ರದ್ಧೆಯಿರುವ ಕೆಲವರಿಗೆ ಗುರುವಿರುವ ವಿದ್ಯೆ ದೃಷ್ಠಿಯಿರುವ ವಿದ್ಯೆಯೆಂದು ತಿಳಿದುಕೊಳ್ಳುವ ಹಾಗೆ ಮಾಡೋಣ.



# ಗುರುಪ್ರಾರ್ಥನ ಶ್ಲೋಕಗಳು

ಶ್ಲೋ॥ ಓಂ ಗುರುಬ್ರಹ್ಮ ಗುರುವಿಷ್ಣು ಗುರುದೇವೋ ಮಹೇಶ್ವರಃ
ಗುರು ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ

ಶ್ಲೋ॥ ಓಂ ಅಖಂಡ ಮಂಡಲಾಕಾರಂ ವ್ಯಾಪ್ತಂ ಏನ ಚರಾಚರಂ
ತತ್ಪದಂ ದರ್ಶಿತಂ ಏನ ತಸ್ಮೈ ಶ್ರೀ ಗುರವೇ ನಮಃ

ಶ್ಲೋ॥ ಓಂ ಮನ್ನಾಥೋ ಶ್ರೀ ಜಗನ್ನಾಥ, ಮದ್ಗುರು ಶ್ರೀ ಜಗದ್ಗುರು
ಮಮಾತ್ಮ ಸರ್ವಭೂತಾತ್ಮ ತಸ್ಮೈ ಶ್ರೀ ಗುರವೇ ನಮಃ

ಶ್ಲೋ॥ ಓಂ ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಕಯಾ
ಚಕ್ಷುರುನ್ಮಿಲಿತಂ ಏನ ತಸ್ಮೈ ಶ್ರೀ ಗುರವೇನಮಃ

ಶ್ಲೋ॥ ಓಂ ಬ್ರಹ್ಮಾನಂದಂ, ಅಚಲಪೂರ್ಣಂ, ತ್ರಿಗುಣಾತೀತಂ,
ಆತ್ಮ ಸಾಕ್ಷಾತ್ಕಾರಂ ಅದ್ವೈತಾನಂದ ಮೂರ್ತಿಂ
ಆನಂದ ನಿತ್ಯ ಸದ್ಗುರುಂ ತಂ ನಮಾಮಿ.

ಶ್ಲೋ॥ ಓಂ ನಿತ್ಯಾನಂದಂ, ಪರಮಸುಖದಂ, ಕೇವಲಂ ಜ್ಞಾನ ಮೂರ್ತಿಂ,
ದ್ವಂದಾತೀತಂ, ಗಗನ ಸದೃಶಂ, ತತ್ವಮಸ್ಯಾದಿ ಲಕ್ಷ್ಯಂ,
ಏಕಂ ನಿತ್ಯಂ ವಿಮಲ ಮಚಲಂ, ಸರ್ವಧೀ ಸಾಕ್ಷಿಭೂತಂ,
ಭಾವಾತೀತಂ, ತ್ರಿಗುಣ ರಹಿತಂ ಸದ್ಗುರುಂ ತಂ ನಮಾಮಿ.

ಶ್ಲೋ॥ ಓಂ ಅನೇಕ ಜನ್ಮ ಸಂಪ್ರಾಪ್ತ ಕರ್ಮಬಂಧ ವಿದಾಹಿನೇ
ಜ್ಞಾನಾನಲ ಪ್ರಭಾವೇನ ತಸ್ಮೈ ಶ್ರೀ ಗುರವೇನಮಃ

ಶ್ಲೋ॥ ಓಂ ಸಚ್ಚಿದಾನಂದ ರೂಪಾಯ ವ್ಯಾಪಿನೇ ಪರಮಾತ್ಮನೇ
ನಮಃ ಶ್ರೀ ಗುರುನಾಥಾಯ ಪ್ರಕಾಶಾನಂದ ಮೂರ್ತಯೇ

ಶ್ಲೋ॥ ಓಂ ಗುರುರೇಕೋ ಜಗತ್ಸರ್ವಂ ಬ್ರಹ್ಮ, ವಿಷ್ಣು, ಶಿವಾತ್ಮಕಂ,
ಗುರೋಃ ಪರತರಂ ನಾಸ್ತಿ ತಸ್ಮಾತ್ಸಂ ಪೂಜ ಯೇದ್ಗುರುಂ



100 **ಶ್ರೀ ಸದ್ಗುರು ಪಾದುಕಾಸ್ತವಮ್**

1. ಶ್ಲೋ॥ ಶ್ರೀ ಸಮಂಚಿತ ಮವ್ಯಯಂ ಪರಮ ಪ್ರಕಾಶಮಗೋಚರಂ
ಭೇದವರ್ಜಿತ ಮಪ್ರಮೇಯ ಮನಂತ ಮಾದ್ಯಮ ಕಲ್ಮಷಂ!
ನಿರ್ಮಲಂ ನಿಗಮಾನ್ತ ಮದ್ವಯ ಮಪ್ರತರ್ಕ್ಯಮ ಬೋಧಕಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

2. ಶ್ಲೋ॥ ನಾದಬಿಂದು ಕಳಾತ್ಮಕಂ ದಶನಾದ ಭೇದ ವಿನೋದಕಂ
ಮಂತ್ರರಾಜ ವಿರಾಜಿತಂ ನಿಜಮಂಡಲಾನ್ತರ್ಭಾಸಿತಮ್!
ಪಂಚವರ್ಣಮಖಂಡ ಮದ್ಭುತ ಮಾದಿ ಕಾರಣ ಮಚ್ಯುತಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

3. ಶ್ಲೋ॥ ವ್ಯೋಮವದ್ಭಹಿರಂತ ರಸ್ಥಿತ ಮಕ್ಷರಂ ನಿಖಿಲಾತ್ಮಕಮ್
ಕೇವಲಂ ಪರಿಶುದ್ಧಮೇಕಮಜನ್ಮಹಿ ಪ್ರತಿರೂಪಕಂ!
ಬ್ರಹ್ಮ ತತ್ತ್ವ ವಿನಿಶ್ಚಯಂ ನಿರತಾನು ಮೋಕ್ಷ ಸುಬೋಧಕಮ್
ಪ್ರಾತರೇವ ಹಿಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

4. ಶ್ಲೋ॥ ಬುದ್ಧಿರೂಪಮ ಬುದ್ಧಿಕಂ ತ್ರಿತಯೈಕಕೂಟ ನಿವಾಸಿನಂ
ನಿಶ್ಚಲಂ ನಿರತ ಪ್ರಕಾಶಕ ನಿರ್ಮಲಂ ನಿಜಮೂಲಕಮ್!
ಪಶ್ಚಿಮಾನ್ತರ ಖೇಲನಂ ನಿಜ ಸುದ್ದ ಸಂಯಮಿ ಗೋಚರಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

5. ಶ್ಲೋ॥ ಹೃದ್ಗತಂ ವಿಮಲಂ ಮನೋಜ್ಞ ವಿಭಾಸಿತಂ ಪರಮಾಣುಕಂ
ನೀಲ ಮಧ್ಯ ಸುನೀಲ ಸನ್ನಿಭ ಮಾದಿಬಿಂದು ನಿಜಾಂಶುಕಮ್!
ಸೂಕ್ಷ್ಮಕರ್ಣಿಕ ಮಧ್ಯಮಸ್ಥಿತ ವಿದ್ಯುದಾದಿ ವಿಭಾಸಿತಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಂ!!

6. ಶ್ಲೋ॥ ಪಂಚ ಪಂಚ ಹೃಷೀಕ ದೇಹ ಮನಶ್ಚ ತುಷ್ಕಪರಸ್ಪರಂ
ಪಂಚ ಭೂತಸ ಕಾಮಷಟ್ಕ ಸಮೀರ ಶಬ್ದಮುಖೇತರಮ್!
ಪಂಚಕೋಶ ಗುಣತ್ರಯಾದಿ ಸಮಸ್ತ ಧರ್ಮವಿಲಕ್ಷಣಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

7. ಶ್ಲೋ॥ ಪಂಚಮುದ್ರ ಸುಲಕ್ಷ್ಯದರ್ಶನ ಭಾವಮಾತ್ರ ನಿರೂಪಣಂ
ವಿದ್ಯುದಾದಿ, ಧಗದ್ಧಗಿತ್ವ ರುಚಿರ್ವಿನೋದ ವಿವರ್ಥನಮ್!
ಚಿನ್ಮಕಾನ್ತರ ವರ್ತಿನಂ ವಿಲಸದ್ವಿಲಾಸ ಮಮಾಯಕಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

8. ಶ್ಲೋ॥ ಪಂಚವರ್ಣ ಶುಚಿರ್ವಿಚಿತ್ರ ವಿಶುದ್ಧ ತತ್ತ್ವವಿಚಾರಣಂ
ಚಂದ್ರಸೂರ್ಯಚಿದಗ್ನಿ ಮಂಡಲ ಮಂಡಿತಂ ಘನಚಿನ್ಮಯಮ್!
ಚಿತ್ಕಳಾ ಪರಿಪೂರ್ಣಮನ್ತರ ಚಿತ್ಸಮಾಧಿ ನಿರೀಕ್ಷಣಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

9. ಶ್ಲೋ॥ ಹಂಸಚಾರ ಮಖಂಡನಾದ ಮನೇಕ ವರ್ಣಮ ರೂಪಕಂ
ಶಬ್ದಜಾಲಮಯಂ ಚರಾಚರ ಜನ್ತುದೇಹ ನಿವಾಸಿನಮ್!
ಚಕ್ರರಾಜ ಮನಾಹತೋದ್ಭವ ಮೇಕವರ್ಣ ಮತಃ ಪರಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

10. ಶ್ಲೋ॥ ಜನ್ಮ ಕರ್ಮ ವಿಲೀನ ಕಾರಣ ಹೇತುಭೂತಮ ಭೂತಕಂ
ಜನ್ಮಕರ್ಮ ನಿವಾರಕಂ ರುಚಿಪೂರಕಂ ಭವತಾರಕಂ!
ನಾಮರೂಪ ವಿವರ್ಜಿತಂ ನಿಜನಾಯಕಂ ಶುಭದಾಯಕಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

11. ಶ್ಲೋ॥ ತಪ್ತಕಾಂಚನ ದೀಪ್ಯಮಾನ ಮಹಾನುಮಾತ್ರಮ ರೂಪಕಂ
ಚಂದ್ರಿಕಾನ್ತರ ತಾರಕೈರವ ಮುಜ್ಜ್ವಲಂ ಪರಮಾಸ್ಪದಮ್!
ನೀಲನೀರದ ಮಧ್ಯಮಸ್ಥಿತಿ ವಿದ್ಯುದಾದಿ ವಿಭಾಸಿತಂ
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

12. ಶ್ಲೋ॥ ಸ್ಥೂಲಸೂಕ್ಷ್ಮಸಕಾರಣಾನ್ತರ ಖೇಲನಂ ಪರಿಪಾಲನಮ್
ವಿಶ್ವತೈಜಸಪ್ರಾಜ್ಞ ಚೇತ ಸಮನ್ತರಾತ್ಮ ನಿಜಾಂಶುಕಮ್!
ಸರ್ವಕಾರಣಮೀಶ್ವರಂ ನಿಟಲಾನ್ತರಾಳ ವಿಹಾರಕಮ್
ಪ್ರಾತರೇವಹಿ ಮಾನಸಾಂತರ್ಭಾವ ಯೇದ್ಗುರು ಪಾದುಕಾಮ್!!

# ಗುರು ಸ್ತೋತ್ರಗಳು

1. ಶ್ಲೋ॥ ಕಳತ್ರಂ ಧನಂ ಪುತ್ರಪೌತ್ರಾದಿ ಸರ್ವಂ
ಗೃಹಂ ಬಾಂಧವಾ ಸರ್ವಮೇ ತದ್ಧಿಜಾತಂ
ಗುರೋರಂಘ್ರಿ ಪದ್ಮೇ ಮನ ಶ್ಚೇನ್ನಲಗ್ನಂ
ತತಃಕಿಂ ತತಃಕಿಂ ತತಃಕಿಂ ತತಃಕಿಂ!!

2. ಶ್ಲೋ॥ ಷಡಂಗಾದಿ ವೇದೋ ಮುಖೇಶಾಸ್ತ್ರ ವಿದ್ಯಾ
ಕವಿತ್ವಾದಿ ಗದ್ಯಂ ಸುಪದ್ಯಂ ಕರೋತಿ
ಗುರೋರಂಘ್ರಿ ಪದ್ಮೇ ಮನ ಶ್ಚೇನ್ನಲಗ್ನಂ
ತತಃಕಿಂ ತತಃಕಿಂ ತತಃಕಿಂ ತತಃಕಿಂ!!

3. ಶ್ಲೋ॥ ವಿದೇಶೇಷು ಮಾನ್ಯಃ ಸ್ವದೇಶೇಷು ಧನ್ಯಃ
ಸದಾಚಾರ ನಿತ್ಯ ಸುವೃತ್ತಿನ್ನ ಚಾನ್ಯಃ
ಗುರೋರಂಘ್ರಿ ಪದ್ಮೇ ಮನ ಶ್ಚೇನ್ನಲಗ್ನಂ
ತತಃಕಿಂ ತತಃಕಿಂ ತತಃಕಿಂ ತತಃಕಿಂ!!

4\. ಶ್ಲೋ॥ ಕ್ಷಮಾಮಂಡಲೆ ಭೂಪ ಭೂಪಾಲ ಬೃಂದಂ
ಸದಾ ಸೇವ್ಯತೇ ಯಸ್ಯಪಾದಾರ ವಿಂಧಂ
ಗುರೋರಂಘ್ರಿ ಪದ್ಮೇ ಮನಶ್ಚೇನ್ನ ಲಗ್ನಂ
ತತಃಕಿಂ ತತಃಕಿಂ ತತಃಕಿಂ ತತಃಕಿಂ!!

5\. ಶ್ಲೋ॥ ನಭೋಗೇ ನಯೋಗೇ ನವಾರಾಜ್ಯಭೋಗೇ
ಸಕಾಂತಾ ಮುಖೇನೈವ ವಿತ್ತೇಷು ಯುಕ್ತಃ
ಗುರೋರಂಘ್ರಿ ಪದ್ಮೇ ಮನಶ್ಚೇನ್ನಲಗ್ನಂ
ತತಃಕಿಂ ತತಃಕಿಂ ತತಃಕಿಂ ತತಃಕಿಂ!!

6\. ಶ್ಲೋ॥ ಯಶೋಮೇಗತಂ ದಿಕ್ಷುದಾನ ಪ್ರತಾಪ
ಜಗದ್ವಸ್ತುಂ ಸರ್ವಂ ಕರೇ ಯತ್ ಪ್ರಸಾದಾತ್
ಗುರೋರಂಘ್ರಿ ಪದ್ಮೇ ಮನಶ್ಚೇನ್ನಲಗ್ನಂ
ತತಃಕಿಂ ತತಃಕಿಂ ತತಃಕಿಂ ತತಃಕಿಂ!!

7\. ಶ್ಲೋ॥ ಅರಣ್ಯೇ ನಿವಾಸೇ ಸ್ವಗೇಹೇಚ ಕಾರ್ಯಃ
ನದೇಹೇ ಮನೋ ವರ್ತತೇಮೇ ಅನಾರ್ವೇ
ಗುರೋರಂಘ್ರಿ ಪದ್ಮೇ ಮನ ಶ್ಚೇನ್ನಲಗ್ನಂ
ತತಃಕಿಂ ತತಃಕಿಂ ತತಃಕಿಂ ತತಃಕಿಂ!!

8\. ಶ್ಲೋ॥ ಅನರ್ಘ್ಯಾಣಿ ರತ್ನಾನಿ ಯುಕ್ತಾನಿ ಸಮ್ಯಕ್
ಸಮಾಲಿಂಗಿತಾ ಕಾಮಿನೀ ಯಾಮಿನೀಸು
ಗುರೋರಂಘ್ರಿ ಪದ್ಮೇ ಮನ ಶ್ಚೇನ್ನಲಗ್ನಂ
ತತಃಕಿಂ ತತಃಕಿಂ ತತಃಕಿಂ ತತಃಕಿಂ!!

9. ಶ್ಲೋ॥ ಶರೀರಂ, ಸುರೂಪಂ, ತಥಾವಾಕಳತ್ರಂ
ಯಶಶ್ಚಾರು ಚಿತ್ರಂ ಧನಂ ಮೇರುತುಲ್ಯಂ
ಗುರೋರಂಘ್ರಿ ಪದ್ಮೇ ಮನ ಶ್ಚೇನ್ನಲಗ್ನಂ
ತತಃಕಿಂ ತತಃಕಿಂ ತತಃಕಿಂ ತತಃಕಿಂ!!

ಓಂ ವಿಶ್ವರೂಪನಾಗಿ ಧರಣಿ ನೀನು ಸಾಕಾರ ರೂಪದಲ್ಲಿ ನೆಲಸಿ
ಮೂಢರನ್ನು ಜ್ಞಾನಿಗಳಾಗಿ ಮಾಡಲು ಬಯಲ್ಪಟ್ಟ ಓ ಗುರುರಾಯಾ
ಇದೇ ನನ್ನ ಮನಸ್ಫೂರ್ವಕ ವಂದನೆಗಳು

ಓಂ ಮಂಗಳಂ ಗುರುದೇವಾಯ ಮಹನೀಯ ಪ್ರಬೋಧಾತ್ಮನೇ
ಸರ್ವಲೋಕ ಶರಣ್ಯಾಯಾ ಸಾದುರೂಪಾಯ ಮಂಗಳಂ
ಓಂ ತತ್ಸತ್.

ಇಂತಿ
**ತ್ರಿಮತ ಏಕೈಕ ಗುರುವು**
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ
**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**



1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




## ಇಂದೂ ಜ್ಞಾನವೇದಿಕೆ (I.G.V)

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







## ಸುವಾರ್ತ ಕ್ರೈಸ್ತವ ಸಂಘ (S.K.S)

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org



*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

***www.dravidashreshtisangham.org***

# ಗುರು ಪ್ರಾರ್ಥನಾಮಂಜರಿ




Author :

The Only Guru of Three Religions

The Spiritual Emperor, Thraitha Theorem Originator

**Sri Acharya Prabodhananda Yogeeshwarulu**


**www.thraithashakam.org**